# ನೀತಿಗಳ ನೆಲಗಟ್ಟು

## ಪೂರ್ವಭಾಗ




**ಗ್ರಂಥಕರ್ತ**

ಹೊಸಕೆರೆ ಚಿದಂಬರಯ್ಯ

ಭಕ್ತಬಂಧು ಕಾರ್ಯಾಲಯ, ಬಸವನಗುಡಿ

**ಬೆಂಗಳೂರು ಸಿಟಿ**



ಕ್ರಿ. ೧೯೩೬


ಮೊದಲನೆಯ ಮುದ್ರಣ ೧,೦೦೦ ಪ್ರತಿಗಳು

ಶಾ. ೧೮೫೮





ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

**ಬೆಲೆ: ೧೨ ಆಣೆ.**

# ಈ ಗ್ರಂಥಕರ್ತರ ಗ್ರಂಥಗಳು.



## ಶಾಲೋಪಯೋಗಿಪುಸ್ತಕಗಳು.

ಗಣಿತಾಬ್ಧಿಭಾಸ್ಕರ, ಚರಿತ್ರಚಿಂತಾಮಣಿ, ಉಪಾಧ್ಯಾಯರ ಯೋಗ್ಯತೆ ಗ...ಮಹತ್ತಿಕೆ, ಬೋಧನಕ್ರಮ, ಬೋಧನೆಯ ಸ್ವಭಾವ,



## ಪದ್ಯಕಾವ್ಯಗಳು.

ಅನುಭವಾಮೃತ (ಶುದ್ಧಪಾಠ) ಸರ್ವಾರ್ಥಸಂದರ್ಶಿನಿ ಎಂಬ ಟೀಕೆಯೊಡನೆ, ಪರಮಾತ್ಮಸ್ತುತಿ, ಗುರುಸ್ತುತಿಸುಮಾಂಜಲಿ, ಭಕ್ತಿಗೀತಾವಳಿ, ಮನಸ್ಸಿಗುಪದೇಶ, ನೀತಿಸಾರ, ಸ್ತ್ರೀಧರ್ಮಸಂಗ್ರಹ, ಶಂಕರಸ್ತೋತ್ರಮಾಲೆ, ಮಾರುತಿಯ ಚರಿತ್ರೆ, ...ದೀಪಿಕೆ, ಶ್ರೀವಿದ್ಯಾರಣ್ಯಕಾವ್ಯ.



## ನಾಟಕಗಳು



ಸುಶೀಲಾಪರಿಣಯ, ಕೃಷ್ಣಮಹೀಸ್ವರೀ, ಸುಧರ್ಮಪ್ರಭಾವ, ಕಲಿಸಂತರಣ, ಸಮೀಸಕಲ್ಪ, ಚೂಡಾಲೆ.

## ಕೀರ್ತನ—ಹರಿಕಥೆ—ಗಳು.

ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ, ಉತ್ತರಗೋಗ್ರಹಣ, ಶ್ರೀವಿದ್ಯಾರಣ್ಯಾಖ್ಯಾನ, ಶ್ರೀಶಂಕರಾಚಾರ್ಯರ ಆಖ್ಯಾನ.

## ಕಾದಂಬರಿಗಳು.

ಕಾಲಾಂತಕ, ಮೈತ್ರೇಯಿ, ವಾಲ್ಮೀಕಿಯ ಜಯ.

## ಇತರ ವಚನಗ್ರಂಥಗಳು.

ತಾರಾನಾಥತರ್ಕವಾಚಸ್ಪತಿ, ಮಾಧವರಾವ ಸಿಂಧ್ಯ, ವಸ್ತುಪ್ರದರ್ಶನ, ಶಂಕರಕಥಾಮೃತ, ರಾಜಭಕ್ತಿ, ಆರ್ಯಮತಸಾರ, ಸೂಕ್ತಿಮಾಲೆ, ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ, ಈಶಸಾರ, ವೇದಾಂತವಿಚಾರದ ಗುಟ್ಟು, ಬ್ರಹ್ಮಾನಂದರು, ರಾಮನಾಮದ ಮಹಿಮೆ, ಭರತನ ಬಂಧುಪ್ರೇಮ, ಗುಣನಿರೂಪಣೆ, ರಾಸಕ್ರೀಡೆ, ಝಾಂಸಿಲಕ್ಷ್ಮೀಬಾಯಿ, ಭರತಖಂಡದ ಜೀವಜ್ಯೋತಿಗಳು, ಆತ್ಮಶಕ್ತಿಯ ತೇಜಸ್ಸು, ಆರ್ಯಧರ್ಮಪ್ರದೀಪ, ನೀತಿಗಳ ನೆಲಗಟ್ಟು—ಮೊದಲಾದವು.

# ಮುನ್ನುಡಿ

ನೀತಿಯ ನಡೆವಳಿಕೆಗಳು ಮನುಷ್ಯನನ್ನು ದೇವರ ಅನುಗ್ರಹಕ್ಕೆ ಪಾತ್ರನನ್ನಾಗಿ ಮಾಡುವವೆಂಬ ಮಾತಿನ ತಿರುಳು ಎಷ್ಟೇ ಸಾರವತ್ತಾಗಿದ್ದರೂ ಅದು ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವಹಾಗಿಲ್ಲ. ಅಷ್ಟು ದೂರದೃಷ್ಟಿಯನ್ನು ಉಪಯೋಗಿಸದಿದ್ದರೂ ಅವು ಜಗತ್ತಿನ ಸರ್ವ ವ್ಯವಹಾರವನ್ನೂ ಸುಸೂತ್ರವಾಗಿಯೂ ಸವಿಕಟ್ಟಾಗಿಯೂ ಮಾಡುವವೆಂಬ ವಿಷಯವು ಮಾತ್ರ ಪ್ರತಿಯೊಬ್ಬರಿಗೂ ಪ್ರತಿಕ್ಷಣದಲ್ಲಿಯೂ ಅನುಭವಕ್ಕೆ ಬರುತ್ತಿರುತ್ತದೆ. ಇದನ್ನು ಮನಗಂಡೇ ವಿದ್ಯಾಭ್ಯಾಸದ ಉದ್ದೇಶಗಳಲ್ಲಿ ಮನುಷ್ಯನನ್ನು ವಿಶೇಷವಾಗಿ ನೀತಿವಂತನನ್ನಾಗಿ ಮಾಡುವದೊಂದು ಹೆಚ್ಚಿನದೆಂದು ನಿಶ್ಚಯಿಸಿ ವಿದ್ಯಾಭಿಮಾನಿಗಳು ಸರಕಾರದ ಪಾಠದ ಪಟ್ಟಿಯಲ್ಲಿ ಕೂಡ ನೈತಿಕಶಿಕ್ಷಣವನ್ನು ಸೇರಿಸಿರುವರು. ಆದರೆ ನೈತಿಕಶಿಕ್ಷಣವಿರುವ ತರಗತಿಯವರು ಅದಕ್ಕಾಗಿ ಪಠ್ಯಪುಸ್ತಕವನ್ನು ಉಪಯೋಗಿಸುವ ಪದ್ಧತಿ ಇಲ್ಲವಾದ್ದರಿಂದ ಈ ಗ್ರಂಥದಲ್ಲಿ ನಾನು ಆ ಚಿಕ್ಕ ಮಕ್ಕಳಿಗೆ ತಕ್ಕ ಪಾಠದ ಪದ್ಧತಿಯನ್ನು ಅನುಸರಿಸಲಿಲ್ಲ. ಆದರೂ ಇದು ಆ ತರಗತಿಗಳಿಗೆ ಪಾಠವನ್ನು ಹೇಳುವ ಉಪಾಧ್ಯಾಯರಿಗೆ ಉತ್ತಮವಾದ ಕೈಪಿಡಿಯಾಗಿಯೂ ಹೈಸ್ಕೂಲ್ ಮೊದಲಾದವುಗಳ ಪ್ರೌಢವಿದ್ಯಾರ್ಥಿಗಳಿಗೆ ಒಳ್ಳೇ ಬೋಧಪ್ರದವಾದ ವಾಚನಪುಸ್ತಕವಾಗಿಯೂ ಇರುವದೆಂದು ನನ್ನ ಅಭಿಪ್ರಾಯವು.

ಹೀಗೆಂದು ಇದನ್ನು ಬರೀ ಶಾಲೆಯ ಹುಡುಗರ ಉಪಯೋಗದ್ದೆಂದು ಯಾರೂ ತಿಳಿಯಬಾರದು. ಅವರಿಗೆ ಉಪಯೋಗವಾಗುವದರ ಜೊತೆಗೆ ಇದು ಜನಸಾಮಾನ್ಯಕ್ಕೇ ನೀತಿಯಲ್ಲಿ ಅಭಿರುಚಿಯನ್ನು ಹೆಚ್ಚಿಸುವಂತಿರಬೇಕೆಂದು ಇದರಲ್ಲಿ ನಾನು ತಿಳಿದಷ್ಟು ಪ್ರಯತ್ನವನ್ನು ಮಾಡಿರುವೆನು. ಅಥವಾ ಹುಡುಗರೇನು ದೊಡ್ಡವರೇನು? ವಿಚಾರಮಾಡಿದರೆ ವಿದ್ಯಾಭ್ಯಾಸಕ್ಕೂ ಕೊನೆ ಇಲ್ಲ; ನೈತಿಕಶಿಕ್ಷಣಕ್ಕೂ ಕೊನೆ ಇಲ್ಲ. ಇವೆರಡೂ ಜನ್ಮವಿರುವವರೆಗೂ ನಡೆಯತಕ್ಕವುಗಳೆ.

ಆದ್ದರಿಂದ ಇದನ್ನು ಹುಡುಗರೂ ಹುಡುಗಿಯರೂ ಗಂಡಸರೂ ಹೆಂಗಸರೂ—**ಮುಖ್ಯವಾಗಿ ಕನ್ನಡಿಗರೆಲ್ಲರೂ**—ಓದತಕ್ಕದ್ದಾಗಿರುವದು.

ಈ ಗ್ರಂಥದಲ್ಲಿ ನೀತಿಗಳನ್ನೆಲ್ಲ ಹೇಳಿ ಮುಗಿಸುವದು ನನ್ನ ಉದ್ದೇಶವಲ್ಲ. ಮುಖ್ಯವಾಗಿ ಮುಂದೆ ಒಂದು ನಿಲ್ಲುವ ನೀತಿಗಳಲ್ಲಿ ಒಂದೊಂದನ್ನು ಒಂದೊಂದು ಪ್ರಕರಣವಾಗಿ ಮಾಡಿಕೊಂಡು ಅದಕ್ಕೆ ಉದಾಹರಣೆಯಾಗಿ ವಿಶೇಷವಾಗಿ **ಪುರಾಣಗಳಲ್ಲಿರುವ ಒಂದೊಂದು ನೀತಿಯ ಅನೇಕ ಉದಾಹರಣೆಗಳನ್ನು ಒಂದೇ ಕಡೆಗೆ ತಂದು ಅವುಗಳನ್ನು ಬೇರೆಬೇರೆ ಮೆಟ್ಟಿಲುಗಳಾಗಿ ಮಾಡಿ ನೀತಿವಿಚಾರಕ್ಕೆ ಹೊಳಪು ಕೊಟ್ಟು** ಅದರ ಸರ್ವತೋಮುಖವಾದ ಹುರುಳನ್ನು ತಿಳಿಯಪಡಿಸುವದರೊಂದಿಗೆ ಬೇರೆಬೇರೆ ಗ್ರಂಥಗಳ ವಾಚನಾಭಿರುಚಿಯು ಹೆಚ್ಚುವಂತೆ ಸಮಸಮವೆ ಅಲ್ಲಲ್ಲಿಗೊಪ್ಪುವ ಹಾಗೆ ಇತರಕವಿಗಳ ಆಧಾರವಾಕ್ಯಗಳನ್ನು ಪೋಣಿಸಿರುವೆನು. ನನ್ನ "**ಆತ್ಮಶಕ್ತಿಯ ತೇಜಸ್ಸು**" ಎಂಬ ಗ್ರಂಥದಲ್ಲಿಯೂ ನೀತಿಗಳ ವಿಚಾರವಿದ್ದರೂ ಅಲ್ಲಿಯ ಲಕ್ಷ್ಯವು ಆತ್ಮಶಕ್ತಿಯ ಕಡೆಗೆ ಇದ್ದು ಅಲ್ಲಿಯ ಉದಾಹರಣೆಗಳೆಲ್ಲ ಇತಿಹಾಸದವುಗಳಾಗಿರುವವು. ಈ ಗ್ರಂಥದಲ್ಲಿ ನೀತಿಗಳ ಬೇರೆಬೇರೆ ಅವಯವಗಳ ಜ್ಞಾನವೇ ಮುಖ್ಯವಾಗಿದ್ದು ಉದಾಹರಣೆಗೆ ವಿಶೇಷವಾಗಿ ಪೌರಾಣಿಕಕಥೆಗಳ ಸಮಾವೇಶವಾಗಿರುವದು. ಪುರಾಣೇತಿಹಾಸಗಳ ರಚನೆಗಳಿಗೆಲ್ಲ ನೀತಿಯೇ ಧ್ಯೇಯವೆಂದು ಸಮುದ್ರದಂತಿರುವ ಆ ಗ್ರಂಥಗಳನ್ನೆಲ್ಲ ಕಡೆದು ಬೆಣ್ಣೆಯಂತೆ ತೆಗೆದು ಬರೆದ ಈ ಗ್ರಂಥವು ಪುರಾಣೇತಿಹಾಸಗಳ ಅಧ್ಯಯನದ ಫಲವನ್ನು ಅನಾಯಾಸವಾಗಿ ತಂದುಕೊಟ್ಟರೆ ಆಗ ನನ್ನ ಶ್ರಮೆಯು ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ನನ್ನ ಮಿತ್ರರಾದ ಮ|| ರಾ|| ಯಳ್ಳಂಬಳಸೆ ಸುಬ್ಬರಾಯರು ಇದನ್ನು ಆದರದಿಂದ ಓದಿನೋಡಿ ಉಪಯುಕ್ತವಾದ ಕೆಲವು ಸೂಚನೆಗಳನ್ನು ಕೊಟ್ಟದ್ದಕ್ಕೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು
ಕಾರ್ತಿಕ, ಅಕ್ಷಯ

**ಹೊಸಕೆರೆ ಚಿದಂಬರಯ್ಯ.**

# ವಿಷಯಕ್ರಮ.

| ವಿಷಯ | ಪುಟ |
|---|---|
| **ಪೂರ್ವಭಾಗ** | |





ಶ್ರೀ

# ನೀತಿಗಳ ನೆಲಗಟ್ಟು

## ನೀತಿಯ ಬೆಲೆ

ಅನೇಕಬಗೆಯ ಜೀವರಾಶಿಗಳು ಕಂಗೊಳಿಸುತ್ತಿರುವ ಈ ಜಗತ್ತಿನಲ್ಲಿ ಮನುಷ್ಯನೇ ಮೇಲುಗೈಯವನಾಗಿರುವದು ಎಲ್ಲರಿಗೂ ತಿಳಿದ ವಿಷಯವಷ್ಟೆ. ಇದರ ಗುಟ್ಟನ್ನು ಕಂಡು ಹಿಡಿಯುವದಕ್ಕೆ ಪ್ರತಿಯೊಬ್ಬನೂ ತನ್ನ ವಿಚಾರಶಕ್ತಿಯನ್ನು ಅಷ್ಟಿಷ್ಟಾದರೂ ಉಪಯೋಗಿಸುವದು ಅಗತ್ಯವಾಗಿದೆ. ಯಾವನಾದರೂ ಹೀಗೆ ವಿಚಾರಮಾಡಿ ಮನುಷ್ಯತ್ವದ ಹೆಚ್ಚುಗಾರಿಕೆ ಯಾವದೆಂಬುದನ್ನು ನಿಶ್ಚಯಿಸಿ ಅದನ್ನು ತನ್ನೊಳಗೆ ಒಡಮೂಡಿಸಿಕೊಂಡಾಗ ಮಾತ್ರ ಅವನು ನಿಜವಾದ ಮನುಷ್ಯನೆನಿಸಿಕೊಳ್ಳುವನೇ ಹೊರತು ಬರೀ ಮನುಷ್ಯಜನ್ಮದಲ್ಲಿ ಹುಟ್ಟಿದ್ದ ಮಾತ್ರಕ್ಕೆ ಅವನಿಗೆ ಅದರ ಘನತೆ ಸಲ್ಲುವದಿಲ್ಲ. ಒಬ್ಬ ಪಂಡಿತನ ಮಗನು ಒಂದು ರಾಜಸಭೆಯಲ್ಲಿ ಪಾಂಡಿತ್ಯದ ಬಹುಮಾನವನ್ನು ಪಡೆಯಬೇಕಾದರೆ ತನ್ನ ತಂದೆಯಂತೆ ತಾನೂ ದಿಗ್ದಂತಿಪಂಡಿತನಾಗಿದ್ದರೆ ಮಾತ್ರ ಸಾಧ್ಯವೇ ಹೊರತು ಅದಿಲ್ಲದೆ ಹೇಗೆ ದಕ್ಕೀತು? ಒಂದು ವೇಳೆ ಆ ವಂಶದಲ್ಲಿ ಶರೀರವನ್ನು ಪಡೆದ ದಾಕ್ಷಿಣ್ಯದಿಂದ ಅಷ್ಟಿಷ್ಟು ಗೌರವವು ದೊರೆತರೂ ಮುಖದ ಮೇಲೆ ಸೆರಗೆಳೆದುಕೊಂಡು ಅಂಗೀಕರಿಸುವ ಆ ಗೌರವವು ಅಷ್ಟು ಭೂಷಣವೆನಿಸಲಾರದು. ಅದನ್ನು ಬಹುಮಾನದ ದ್ರವ್ಯವೆನ್ನುವದಕ್ಕಿಂತಲೂ ಹಿರಿಯರ

ಹೆಸರಿನ ಮೇಲಿನ ಬಾಡಿಗೆಯ ಹಣವೆಸ್ಟುವದು ಹೆಚ್ಚು ಒಪ್ಪುವದು, ಸ್ವಸಾಮರ್ಥ್ಯದಿಂದ ಪಡೆಯುವ ಗೌರವವೇ ನಿಜವಾದ ಗೌರವವು.

ಮನುಷ್ಯನ ಶರೀರರಚನೆಯ ದೃಷ್ಟಿಯಿಂದ ನೋಡಿದರಂತು ಮನುಷ್ಯತ್ವದ ಹೆಚ್ಚುಗಾರಿಕೆಯು ನೆಲೆಯೇ ಕಾಣುವದಿಲ್ಲ. ಮನುಷ್ಯ ಬಲಕ್ಕಿಂತ ಸಹಸ್ರಪಾಲು ಬಲಶಾಲಿಗಳಾದ ಹುಲಿಕರಡಿಗಳುಂಟು. ಮನುಷ್ಯನ ನೇತ್ರಪಟುತ್ವಕ್ಕಿಂತ ಸಹಸ್ರಪಾಲು ಹೆಚ್ಚು ನೇತ್ರಪಟುತ್ವವುಳ್ಳ ಹದ್ದುಗಳುಂಟು. ಮನುಷ್ಯನ ಸ್ವರಮಾಧುರ್ಯಕ್ಕಿಂತ ಸಹಸ್ರಪಾಲು ಮಿಗಿಲಾದ ಸ್ವರಮಾಧುರ್ಯವುಳ್ಳ ಕೋಗಿಲೆಗಳುಂಟು. ಮನುಷ್ಯನ ಶರೀರಮಾರ್ದವಕ್ಕಿಂತ ಸಹಸ್ರಪಾಲು ಮೃದುಶರೀರವುಳ್ಳ ಮೊಲಗಳುಂಟು. ಹೀಗೆಯೇ ವಿಚಾರಮಾಡಿದರೆ ಮನುಷ್ಯನನ್ನು ಏನೂ ಕೆಲಸಕ್ಕೆ ಬಾರದವನೆನಿಸುವಷ್ಟು ಇಂದ್ರಿಯಶಕ್ತಿಗಳಲ್ಲಿ ಮುಗಿಲು ಮುಟ್ಟಿರುವ ಮೃಗಪಕ್ಷಿಗಳು ಬೇಕಾದಷ್ಟಿರುವವು. ಆದ್ದರಿಂದ ಬರೀ ಮನುಷ್ಯದೇಹವನ್ನು ಪಡೆದ ಮಾತ್ರಕ್ಕೇ ಮನುಷ್ಯತ್ವದ ಗೌರವವು ಬರುವದಿಲ್ಲ.

ಇನ್ನು ಸರ್ವಾಧಿಪತ್ಯವು ಮನುಷ್ಯನಿಗೆ ಬಂದಿರುವದಕ್ಕೆ ಕಾರಣವೇನು? ಮನುಷ್ಯನು ಅವುಗಳನ್ನೆಲ್ಲ ತನ್ನ ಆಳಿಕೆಗೆ ಒಳಪಡಿಸಿಕೊಂಡು ಅವುಗಳಿಗೆ ಸೂತ್ರಧಾರನಾಗಿ ಅವುಗಳಿಂದ ತನ್ನ ಸೇವೆಯನ್ನು ಮಾಡಿಸಿಕೊಳ್ಳುವಂಥ ಬುದ್ಧಿಶಕ್ತಿಯುಳ್ಳವನಾಗಿರುವದೇ ಕಾರಣವೆಂದು ವಿವೇಕಿಗಳು ಹೇಳುವರು. ಇದು ಸತ್ಯವೇ ಸರಿ. ಬುದ್ಧಿಶಕ್ತಿಯಿಂದಲೇ ಮನುಷ್ಯನ ಮನುಷ್ಯತ್ವ. ಆದರೆ ಇಲ್ಲೊಂದು ಎಚ್ಚರಿಕೆಯ ಮಾತನ್ನು ಹೇಳಬೇಕಾಗಿದೆ. ಅದೇನೆಂದರೆ—ಮನುಷ್ಯತ್ವದ ಮೇಲ್ಮೆಯ ಸೂಚಕವಾದ ಬುದ್ಧಿಶಕ್ತಿಯು ಉಳಿದ ಪ್ರಾಣಿಗಳ ಮೇಲೆಲ್ಲ ಮಂಕುಬೂದಿಯನ್ನು ತಳೆದು ತನ್ನ ಬೇಳೆಯ ಕಾಳನ್ನು ಬೇಯಿಸಿಕೊಳ್ಳುವ ನರಿಯ ಯುಕ್ತಿಯಂಥ ಬುದ್ಧಿಶಕ್ತಿಯಲ್ಲ. ಸ್ವಾರ್ಥತೆಯ ಆವೇಶದಿಂದ ಕೂಡಿದಂಥ ಈ ಬುದ್ಧಿಶಕ್ತಿಯೇ ಮನುಷ್ಯತ್ವದ ಮೇಲ್ಮೆಯ ಹೆಗ್ಗುರುತಾದರೆ ಮನುಷ್ಯತ್ವಕ್ಕೆ ಇದೊಂದು ಕಲಂಕವೇ ಸರಿ. ಇದಲ್ಲದೆ ಈ ಲಕ್ಷಣ

ದಂತೆ ನೋಡಿದರೆ ಸರ್ಕಸ್ ಆಟದವರು ಮಾತ್ರವೇ ಮನುಷ್ಯತ್ವದ ಪರಮಾವಧಿಗೆ ಉದಾಹರಣೆಯಾಗುವರು. ಅಭಿಜ್ಞರು ಯಾರೂ ಈ ಅಭಿಪ್ರಾಯವನ್ನು ಮನ್ನಿಸುವದಿಲ್ಲ. ಬುದ್ಧಿಶಕ್ತಿಯ ಪ್ರಭಾವದಿಂದ ಇತರಪ್ರಾಣಿಗಳು ಮನುಷ್ಯನ ಬಲೆಗೆ ಬೀಳಬಹುದು. ಆದರೆ ಅವು ಗಳನ್ನು ಬಲೆಗೆ ಕೆಡಹುವದೇ ಬುದ್ಧಿಶಕ್ತಿಯ ಮುಖ್ಯಸ್ವರೂಪವಲ್ಲ. ಬಾಳೆಯ ಗಿಡಕ್ಕೆ ಎಲೆಗಳ ಸ್ವರೂಪವು ಹೇಗೆ ಅಮುಖ್ಯವೋ ಬುದ್ಧಿ ಶಕ್ತಿಗೆ ಇತರ ಪ್ರಾಣಿಗಳನ್ನು ಬಲೆಗೆ ಕೆಡಹುವ ಸ್ವರೂಪವು ಹಾಗೆಯೇ ಅಮುಖ್ಯವು. ಬಾಳೆಯ ಗಿಡದಲ್ಲಿ ಮುಖ್ಯವಾದ ಫಲಸ್ವರೂಪವನ್ನು ಮರೆಮಾಡಿ ಎಲೆಗಳು ತಾವೇ ಮುಂದೆ ಕಾಣುವಂತೆ ಬುದ್ಧಿಶಕ್ತಿಯಲ್ಲಿ ಮುಖ್ಯವಾದ ಫಲಸ್ವರೂಪವನ್ನು ಮರೆಮಾಡಿ ಇತರ ಜೀವಿಗಳನ್ನು ಬಲೆಗೆ ಕೆಡಹುವ ಸ್ವರೂಪವು ತಾನೇ ಮುಂದೆ ಕಾಣುತ್ತಿರುವದು. ವಿವೇಕಿಗಳು ಎಲೆಗಳ ಮರೆಯಲ್ಲಿರುವ ಮುಖ್ಯಸ್ವರೂಪವಾದ ಹಣ್ಣನ್ನು ನಿಟ್ಟಿಸಿ ಅದರ ಸ್ವಾದವನ್ನು ಅನುಭವಿಸುವಂತೆ ವಿಚಾರಪರರಾದವರು ಇತರ ಜೀವಿಗಳನ್ನು ಬಲೆಗೆ ಕೆಡಹುವ ಸ್ವರೂಪದ ಮರೆಯಲ್ಲಿರುವ ಮುಖ್ಯಸ್ವರೂಪದ ಕಡೆಗೆ ಲಕ್ಷ್ಯವನ್ನು ಕೊಟ್ಟು ಅದರ ರುಚಿಯನ್ನು ನೋಡಬೇಕು.

ಬಾಳೆಯ ಗಿಡಗಳ ಉದ್ದೇಶವು ಕ್ಷುದ್ರವಾದ ಎಲೆಗಳಿಗಾಗಿ ಹೇಗಿ ರುವದಿಲ್ಲವೋ ಹಾಗೆ ಭಗವಂತನು ಮನುಷ್ಯನಿಗೆ ಕೊಟ್ಟಿರುವ ಬುದ್ಧಿ ಶಕ್ತಿಯ ಉದ್ದೇಶವು ಇತರ ಪ್ರಾಣಿಗಳನ್ನು ಪಳಗಿಸಿಕೊಳ್ಳುವ ಮಾತ್ರಕ್ಕಲ್ಲ. ಬಾಳೆಯ ಗಿಡಗಳು ರಸವತ್ತಾದ ಬಾಳೆಯ ಹಣ್ಣುಗಳಿಗಾಗಿ ಇರುವಂತೆ ಬುದ್ಧಿಶಕ್ತಿಯು ಆನಂದಕರವಾದ ಭಗವತ್ಸ್ವರೂಪದ ಯಥಾರ್ಥಜ್ಞಾನ ವನ್ನು ಮಾಡಿಕೊಳ್ಳುವದಕ್ಕಾಗಿ ಇರುವದು. ಈ ಬುದ್ಧಿಶಕ್ತಿಯು ಭಗವಂತನಿಂದ ಮನುಷ್ಯನಿಗೆ ಬಂದಿರುವ ಪರಮಪ್ರಸಾದ. ಮನು ಷ್ಯನು ಈ ಶಕ್ತಿಯನ್ನು ಸದುಪಯೋಗಮಾಡಿಕೊಂಡು ಭಗವಂತನ ತತ್ತ್ವವನ್ನು ತಿಳಿಯದೆ ಹೋದರೆ ಅವನು ಕಣ್ಣಿದ್ದೂ ಕುರುಡನಂ ತೆಯೇ ಸರಿ. ಪಶುಗಳಿಗೆ ಈ ಬುದ್ಧಿಶಕ್ತಿ ಇಲ್ಲದ್ದರಿಂದ ಅವು ತಮ್ಮ

ಬರೀ ಇಂದ್ರಿಯಾರ್ಥಗಳನ್ನು ಉಪಭೋಗ ಮಾಡಿಕೊಂಡು ತಮ್ಮ ಜೀವನವನ್ನು ಮುಗಿಸುವವು. ಮನುಷ್ಯನೂ ಅಷ್ಟೇ ಮಾಡುವದು ಯೋಗ್ಯವಲ್ಲ. ಅವನು ಒಂದು ದೊಡ್ಡ ಪರೀಕ್ಷೆಯಲ್ಲಿ ಉತ್ತೀರ್ಣನಾಗುವದಕ್ಕೆ ಹೋರಾಡುವ ವಿದ್ಯಾರ್ಥಿಯಂತೆ ಇದ್ದಾನೆ. ಭಗವಂತನೇ ಅವನಿಗೆ ಪರೀಕ್ಷಕನು. ಭಗವಂತನು ಒಂದು ಕಣ್ಣಾಮುಚ್ಚಾಲೆಯ ಆಟವನ್ನು ಹೂಡಿ ಮನುಷ್ಯರಿಗೆಲ್ಲ ಕಣ್ಣುಮುಚ್ಚಿ ತಾನು ಕಾಣದಂತೆ ಅಡಗಿಕೊಂಡಿದ್ದಾನೆ. ಮನುಷ್ಯನು ತನ್ನ ಬುದ್ಧಿಶಕ್ತಿಯಿಂದ ಭಗವಂತನನ್ನು ಮುಟ್ಟಬೇಕಾಗಿದೆ. ಹೀಗೆ ತನ್ನನ್ನು ಮುಟ್ಟಿದವನಿಗೆ ಭಗವಂತನು ಹುಟ್ಟುಸಾವುಗಳ ದುಃಖವನ್ನು ತಪ್ಪಿಸಿ ತನ್ನ ಸಕಲೈಶ್ವರ್ಯವನ್ನೂ ಕೊಟ್ಟುಬಿಡುತ್ತಾನೆ. ಈ ಆಟದಲ್ಲಿ ಮನುಷ್ಯನು ತನ್ನ ಬುದ್ಧಿಶಕ್ತಿಯಿಂದ ಭಗವಂತನನ್ನು ಗುರ್ತಿಸದಿದ್ದರೆ ಅವನು ಎಷ್ಟು ದಿನವಾದರೂ ಕಣ್ಣುಮುಚ್ಚಿಕೊಂಡೇ ಮೂಲೆಮೂಲೆಗಳನ್ನು ಹಾಯುತ್ತಿರಬೇಕಾಗುತ್ತದೆ. ಎಂದರೆ ಅವನು ಅಜ್ಞಾನಿಯಾಗಿ ಹುಟ್ಟುಸಾವುಗಳನ್ನು ಪಡೆಯುತ್ತ ಸುಖದ ಮೇಲೆ ದುಃಖವನ್ನೂ ದುಃಖದ ಮೇಲೆ ಸುಖವನ್ನೂ ಅನುಭವಿಸುತ್ತ ಇರಬೇಕಾಗುತ್ತದೆ. ಈ ಕೋಟಲೆಯನ್ನು ಕಳೆದುಕೊಳ್ಳಬೇಕಾದರೆ ಬುದ್ಧಿಶಕ್ತಿಯ ಸದುಪಯೋಗದ ಮಾರ್ಗವನ್ನು ನಿಶ್ಚಯಿಸಿಕೊಳ್ಳಬೇಕು.

ಬುದ್ಧಿಶಕ್ತಿಯಿಂದ ಭಗವಂತನ ತತ್ತ್ವವನ್ನು ತಿಳಿಯುವ ದಾರಿಗಳು ಧರ್ಮಗ್ರಂಥಗಳಲ್ಲಿ ತುಂಬಿವೆ. ಆದರೆ ಅವುಗಳ ಜ್ಞಾನವು ಸಾಮಾನ್ಯರಿಗೆ ಜೀರ್ಣವಾಗುವ ಸಂಭವವು ಕಡಿಮೆ. ಎಲ್ಲರಿಗೂ ಅರಗುವಂತಿರುವ ಅವುಗಳ ಸಾಮಾನ್ಯರೂಪಕ್ಕೆ ನೀತಿಗಳೆಂದು ಪ್ರಸಿದ್ಧಿಯಿದೆ. ಆದ್ದರಿಂದ ಧರ್ಮವೂ ನೀತಿಯೂ ಒಂದಕ್ಕೊಂದು ಹೊರತಲ್ಲ. ಧರ್ಮವೆಂಬ ಮಾತು ಭಗವಂತನ ಅನುಗ್ರಹವನ್ನು ಬಯಸಿ ಮಾಡುವ ಕರ್ಮಗಳಲ್ಲಿ ವಿಶೇಷವಾಗಿ ರೂಢಿಯಾಗಿದೆ. ನೀತಿಯೆಂಬ ಮಾತು ಸಾಮಾನ್ಯವಾಗಿ ಒಳ್ಳೆಯ ನಡೆವಳಿಕೆಗಳೆಂಬರ್ಥದಲ್ಲಿ ರೂಢಿಯಾಗಿದೆ. ನೀತಿಯೆಂಬ ಮಾತಿಗೆ ಮನುಷ್ಯನನ್ನು ಭಗವಂತನ ಕಡೆಗೆ ಕರೆದುಕೊಂಡು ಹೋಗ

ತಕ್ಕ ನಡೆವಳಿಕೆಗಳೆಂದರ್ಥ. ಹೀಗೆ ಧರ್ಮನೀತಿಗಳೆರಡೂ ಒಂದ ಕ್ಕೊಂದು ಹೊಂದಿಕೊಂಡಿದ್ದರೂ ಒಂದು ದೃಷ್ಟಿಯಿಂದ ನೋಡಿದರೆ ನೀತಿಗೇ ಹೆಚ್ಚಿನ ಮಹತ್ತ್ವವು ಕಾಣುತ್ತದೆ. ಏಕೆಂದರೆ ಒಬ್ಬನು ಬೇಕಾದಷ್ಟು ಧರ್ಮಾಚರಣೆಯನ್ನು ಮಾಡುತ್ತಿದ್ದರೂ ಅವನ ವ್ಯವ ಹಾರದಲ್ಲಿ ಅನೀತಿಯು ಬೆರೆತುಕೊಂಡಿದ್ದರೆ ಅವನ ಪ್ರಯತ್ನವೆಲ್ಲ ಬೂದಿ ಯಲ್ಲಿ ಹೋಮವನ್ನು ಮಾಡಿದಂತೆಯೇ ಸರಿ. ಒಬ್ಬನು ಯಾವ ಧರ್ಮಾಚರಣೆಯ ದೀಕ್ಷೆಯನ್ನೂ ವಹಿಸದಿದ್ದರೂ ನೀತಿಪರನಾಗಿ ಮಾತ್ರ ಇದ್ದರೆ ಅವನಿಗೆ ಭಗವದನುಗ್ರಹವು ದೂರವಲ್ಲವೆಂದು ಎಲ್ಲರೂ ಒಪ್ಪಿ ಕೊಳ್ಳುವರು. ಇದರಿಂದ ನೀತಿಯೇ ಭಗವಂತನನ್ನು ಮೆಚ್ಚಿಸುವ ಮಾರ್ಗವೆಂದು ನಿಶ್ಚಯವಾಯಿತು. ಇದೇ ನೀತಿಯ ಬೆಲೆ.

ಭಗವದ್ಗೀತೆಯೆಂಬ ಧರ್ಮಗ್ರಂಥವು ನೀತಿಯನ್ನು ದೈವೀಸಂಪ ತ್ತೆಂದೂ ಎಂದರೆ ದೇವತೆಗಳಿಗೆ ಯೋಗ್ಯವಾದ ಗುಣವೆಂದೂ ಅನೀತಿ ಯನ್ನು ಆಸುರೀಸಂಪತ್ತೆಂದೂ ಎಂದರೆ ರಾಕ್ಷಸರಿಗೆ ಒಪ್ಪುವ ಗುಣವೆಂದೂ ಹೇಳಿರುವದಲ್ಲದೆ ಮನುಷ್ಯನ ಕಷ್ಟಕ್ಕೆಲ್ಲ ಆಸುರೀಸಂಪತ್ತೇ ಕಾರಣ ವೆಂದೂ ಸುಖಕ್ಕೆಲ್ಲ ದೈವೀಸಂಪತ್ತೇ ಕಾರಣವೆಂದೂ ಸ್ಪಷ್ಟವಾಗಿ ಹೇಳಿದೆ. ಹೀಗೆ ನೀತಿಯನ್ನು ಭಗವದನುಗ್ರಹಕ್ಕೆ ಸಾಧನವಾಗಿ ಹೇಳಿ ರುವದಿಷ್ಟೇ ಅಲ್ಲ.

"ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್"

ಎಂಬ ಮುಂತಾದ ಶ್ಲೋಕಗಳಲ್ಲಿ ದುರಭಿಮಾನವಿಲ್ಲದಿರುವಿಕೆ, ಬರೀ ತೋರಿಕೆ ಇಲ್ಲದಿರುವಿಕೆ, ಹಿಂಸೆ ಇಲ್ಲದಿರುವಿಕೆ, ಕ್ಷಮೆ, ಸರಳ ಸ್ವಭಾವ—ಮೊದಲಾದ ನೀತಿಗಳನ್ನೇ "**ಏತಜ್ಜ್ಞಾನಮಿತಿ ಪ್ರೋಕ್ತಂ**" ಎಂಬ ಮಾತಿನಿಂದ ಭಗವಂತನ ತತ್ತ್ವಜ್ಞಾನವೆಂದು ಕರೆದಿರುತ್ತದೆ. ಭಗವಂತನ ತತ್ತ್ವಜ್ಞಾನವು ಬೇರೆ ಇದ್ದರೂ ಈ ನೀತಿಗಳನ್ನು ಆಶ್ರ ಯಿಸಿದವರಿಗೆ ಆ ಜ್ಞಾನವು ಆಗಿಯೇ ಆಗುವದರಿಂದ ಈ ನೀತಿಗಳನ್ನೇ ಆ ಜ್ಞಾನವೆಂದು ಕರೆದದ್ದಾಗಿರುತ್ತದೆ.

ಮನುಷ್ಯನಿಗೆ ನೀತಿಯು ಸುಖಕ್ಕೂ ಅನೀತಿಯು ಕಷ್ಟಕ್ಕೂ ಏಕೆ ಕಾರಣವಾಗಿರಬಹುದೆಂಬ ಒಗಟನ್ನು ಒಡೆದು ನೋಡಿದರೆ ನೀತಿಯು ಮನಸ್ಸನ್ನು ಸ್ವಚ್ಛವಾಗಿಡುವದರಿಂದ ಅದರಲ್ಲಿ ಬೆಳೆದು ತೋರಿ ಭಗವತ್ತತ್ತ್ವದ ಮಾರ್ಗವು ಕಣ್ಣಿಗೆ ಕಟ್ಟಿದ ಹಾಗೆ ಆಗಿ ಆ ಭಗವಂತನ ಶಾಂತವಾದ ಆನಂದಸ್ವರೂಪವು ಮನಸ್ಸಿನಲ್ಲಿ ತುಂಬಿಕೊಂಡು ಸುಖಕ್ಕೆ ಕಾರಣವಾಗುತ್ತದೆ. ಅನೀತಿಯು ಮನಸ್ಸಿನ ಮೇಲೆ ಅನೇಕಬಗೆಯ ಹೊಲಸಿನ ಕಲೆಗಳನ್ನು ಕೂಡಿಸುವದರಿಂದ ಮುಂದೇನೋ ಕಾಣುವ ಹಾಗೂ ಕಾಣದ ಹಾಗೂ ಆಗಿ ದಿಗ್ಭ್ರಮೆಯಿಂದ ಮನಸ್ಸಿನಲ್ಲಿ ತಳಮಳವೇ ತುಂಬಿಕೊಳ್ಳುತ್ತದೆ. ಇಂಥವರ ಮನಸ್ಸು ಭಗವತ್ತತ್ತ್ವದ ವಿಚಾರವನ್ನು ಹಿಡಿದುಕೊಳ್ಳಲಾರದೆ ಹೋಗುವದು. ಆದ್ದರಿಂದಲೇ ಭಗವತ್ತತ್ತ್ವದ ಪರಮರಹಸ್ಯವನ್ನು ಹೇಳುವ ಮಹಾನುಭಾವರಾದ ಜ್ಞಾನಸಿಂಧುಕಾರರೂ ಅನುಭವಾಮೃತಕಾರರೂ ಮೊದಲಾದವರು ತಮ್ಮ ಗ್ರಂಥಗಳನ್ನು ನೀತಿವಂತರಿಗೆ ಮಾತ್ರ ಹೇಳಿರೆಂದೂ ಅನೀತಿವಂತರಿಗೆ ಹೇಳಬೇಡಿರೆಂದೂ ಅಲ್ಲಲ್ಲಿಗೆ ಎಚ್ಚರಿಕೆಯನ್ನು ಕೊಡುತ್ತಲೇ ಹೋಗಿದ್ದಾರೆ.

**ಶ್ರೀ ನಿಜಗುಣಶಿವಯೋಗಿಗಳು** ತಮ್ಮ ಕೈವಲ್ಯಪದ್ಧತಿಯೆಂಬ ಗ್ರಂಥದಲ್ಲಿ ನೀತಿಕ್ರಿಯಾಚರ್ಯಪ್ರತಿಪಾದನಸ್ಥಲವೆಂದು ಒಂದು ಪ್ರಕರಣವನ್ನೇ ಆರಂಭಿಸಿ ತಮಗೆ ನೀತಿಸಂಪತ್ತನ್ನು ಕೊಡೆಂದು ಈಶ್ವರನನ್ನು ಪ್ರಾರ್ಥಿಸಿಕೊಂಡಿರುವದೇನೆಂದರೆ;—

ಶಂಕರಾಭರಣ

ಬೇಡುವೆನಭವ ನಿಮ್ಮನು ಭವಭವದೊಳು ।
ಮಾಡೆನಗೊಲಿದು ಸುಗುಣಸಂತತಿಯನಿಂತು ॥ ಪ ॥

ಎಡರಡಸಿದ ವೇಳೆಯೊಳು ಧೈರ್ಯವನು; ಸಿರಿ ।
ಪಡೆದು ಜೀವಿಸುವೆಡೆಯೊಳು ವಿನಯವನು; ॥
ಕಡುಜವ್ವನದೊಳು ವಿಕೃತಿದೊರೆದಿಹುದನು; ।
ಪಿಡಿದ ನೇಮವನೆಡೆವಿಡದಚಲವನು ॥ ೧ ॥

ಕೈವಲ್ಯಕಲ್ಪವಲ್ಲರಿಯೆಂಬ ಗ್ರಂಥದಲ್ಲಿ **ಶ್ರೀಸರ್ಪಭೂಷಣಶಿವಯೋಗಿ**ಗಳೂ ನೀತಿಕ್ರಿಯಾಚರ್ಯಪ್ರತಿಪಾದನಸ್ಥಲವನ್ನಾರಂಭಿಸಿ ಹೇಳಿರುವದೇನೆಂದರೆ—

ಶ್ರೀರಾಗ

ಎಲೆ ಮಗನೆ ಬಾ, ನಿತ್ಯಸುಖಮುಕ್ತಿಸಂಪದವ ।
ನೆಳಸುವೊಡೆ ಮುಖ್ಯಸಾಧನಗಳೆಂದೆನಿಪ ಗುಣ । [॥ ಪ ॥
ಗಳನು ನಿನಗೊಂದೊಂದನೀಗಳಾನೊರೆವೆನವನೆಡೆವಿಡದಿರನುದಿನದೊಳು ॥

ಶ್ರುತಿಗುರೂಕ್ತಿಗಳ ಕಡೆಗಾಣದಿರು; ವಿಷಮಸಂ ।
ಸೃತಿಗಲಸು; ಕುಜನಸಂಸರ್ಗಮುಳಿಯುಖಿಲರ್ಗೆ । [ಬಿಡು; ॥
ಹಿತವ ಬಯಸರಿತವರೊಳೊಡನಾಡು; ಪರಸತಿಯ ನೆನೆಯದಿರ್; ಕ್ರೋಧವ

ಹಿತವಿದಹಿತವಿದೆಂದು ತಿಳಿಯನೃತವಾಡಬೇ ।
ಡತಿಲೋಭದೊಡೆಯಾರ್ತರಲ್ಲಿ ಮರುಗೇನೊಂದ ।
ಹತಿಸದಿರ್ತನುಮನಗಳೊಂದೆನಿಸು; ಸತ್ಯವಿಡಿ; ದುಷ್ಕರ್ಮಕಡಿಯಿಡದಿರು ॥

ಯೋಗಶಾಸ್ತ್ರಕಾರರಾದ ಭಗವಾನ್ **ಪತಂಜಲಋಷಿ**ಗಳು ತಮ್ಮ ಅಷ್ಟಾಂಗಯೋಗವೆಂಬ ಎಂಟಂತಸ್ತಿನ ಉಪ್ಪರಿಗೆಯ ಅರಮನೆಯನ್ನು ನೀತಿಯೆಂಬ ಅಡಿಗಲ್ಲಿನ ಮೇಲೆಯೇ ಕಟ್ಟಿರುತ್ತಾರೆ. ಅದು ಹೇಗೆಂದರೆ— ಅವರ ಎಂಟು ಅಂಗಗಳಲ್ಲಿ ಯಮವೆಂಬುವದೇ ಮೊದಲನೆಯದು. ಯಮವೆಂದರೆ ಅವರ

'ಅಹಿಂಸಾಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾ ಯಮಾಃ'

ಎಂಬ ಸೂತ್ರದಂತೆ ಹಿಂಸೆ ಮಾಡದಿರುವದು, ನಿಜವನ್ನು ಹೇಳುವದು, ಕದಿಯದಿರುವದು, ಬ್ರಹ್ಮಚರ್ಯ, ದಾನವನ್ನು ತೆಗೆದುಕೊಳ್ಳದಿರುವದು— ಇವೆಲ್ಲ ಮುಖ್ಯನೀತಿಗಳಲ್ಲದೆ ಮತ್ತೇನು? ಈ ನೀತಿಯ ಮೆಟ್ಟಿಲ ಮೇಲೆ ಗಟ್ಟಿಯಾಗಿ ಕಾಲೂರಿನಿಂತವರಿಗೆ **ಶ್ರೀಪತಂಜಲಿಗಳು** ಆಮೇಲೆ ನಿಯಮವೆಂಬ ಎರಡನೆಯ ಅಂಗವಾಗಿ

'ಶೌಚಸಂತೋಷತಪಃಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ'

ಎಂಬ ಸೂತ್ರದಲ್ಲಿ ಒಳಗೆ ಮತ್ತು ಹೊರಗೆ ಶುದ್ಧಮಾಡಿಕೊಳ್ಳುವದು, ತೃಪ್ತನಾಗಿರುವದು, ತಪಸ್ಸು, ಶಾಸ್ತ್ರವನ್ನು ಓದುವದು, ಮತ್ತು

ದೇವರನ್ನು ಪೂಜಿಸುವದು—ಮೊದಲಾದ ನಿಯಮಗಳನ್ನು ಹೇಳಿರುವರು. "ಅಟ್ಟಕ್ಕೆ ಹಾರಲಾರದವನು ಬೆಟ್ಟಕ್ಕೆ ಹಾರ್ಯಾನೇ?" ಎಂಬ ಗಾದೆಯಂತೆ ನೀತಿಯ ಮೆಟ್ಟಿಲ ಮೇಲೆಯೇ ನಿಲ್ಲಲಾರದೆ ತಟ್ಟಾಡುವವನು ನಿಯಮಗಳನ್ನು ಹೇಗೆ ಹಿಡಿದಾನು! ಆದ್ದರಿಂದಲೂ ಭಗವದನುಗ್ರಹಕ್ಕೆ ನೀತಿಯೇ ಮುಖ್ಯಸಾಧನವು. ಜಗತ್ತಿನಲ್ಲಿ ಆಗುವ ಕಾರ್ಯಹಾನಿಗಳಿಗೆಲ್ಲ ಆಯಾ ಕಾರ್ಯಗಳ ಸಾಧನದ ವಿಷಯದಲ್ಲಿ ನಡೆಸಿದ ಉಪೇಕ್ಷೆಯೇ ಕಾರಣವಾಗಿರುವದು. ಭಗವದನುಗ್ರಹವನ್ನು ಪಡೆಯಬೇಕೆಂದು ಹೊಯ್ದಾಡುತ್ತಿರುವ ಅನೇಕರಿಗೆ ನಿರಾಶೆಯಾಗುವದಕ್ಕೂ ಈ ನೀತಿಯೆಂಬ ಸಾಧನೆಯ ಉಪೇಕ್ಷೆಯೇ ಕಾರಣವಾಗಿರುವದು.

ಹೀಗೆ ನೀತಿಯು ಧರ್ಮಕ್ಕೆ ಸಮೀಪವಾಗಿರುವದೊಂದೇ ಅಲ್ಲ; ನೀತಿ ಇಲ್ಲದಿದ್ದರೆ ಜಗತ್ತಿನ ವ್ಯವಹಾರವೇ ನಡೆಯುವದಿಲ್ಲ. ವ್ಯವಹಾರದಲ್ಲಿ ಸಂಭವಿಸುವ ಕಷ್ಟನಿಷ್ಠುರಗಳಿಗೆಲ್ಲ ಯಾರಾದರೊಬ್ಬರು ನೀತಿನಿಯಮವನ್ನು ಉಲ್ಲಂಘಿಸಿದ್ದೇ ಕಾರಣವಾಗಿರುವದು. ರಾಜಕೀಯ ಪಕ್ಷದವರು ತಮ್ಮ ನ್ಯಾಯನಿಬಂಧನೆಗಳನ್ನು ರಚಿಸಿರುವದು ಕೂಡ ಜಗತ್ತಿನಲ್ಲಿ ನೀತಿಯ ರಕ್ಷಣೆಗಾಗಿಯೇ ಇರುವದು. ಆದ್ದರಿಂದ ನೀತಿನಿಯಮದ ವಿಷಯಕ್ಕೆ ಮನುಷ್ಯನು ಪೂರ್ಣವಾದ ಲಕ್ಷ್ಯವನ್ನು ಕೊಡಬೇಕು.

ಮನುಷ್ಯನಿಗೆ ನೀತಿಯ ಅಗತ್ಯದ ವಿಷಯದಲ್ಲಿ ಸುಭಾಷಿತಕಾರರು ಹೇಳಿರುವದೇನೆಂದರೆ—

> "ಪೃಥಿವ್ಯಾಂ ತ್ರೀಣಿ ರತ್ನಾನಿ ಜಲಮನ್ನಂ ಸುಭಾಷಿತಮ್ |
> ಮೂಢೈಃ ಪಾಷಾಣಖಂಡೇಷು ರತ್ನಸಂಜ್ಞಾ ವಿಧೀಯತೇ ||"

ತಾತ್ಪರ್ಯವೇನೆಂದರೆ—"ಅವಿವೇಕಿಗಳು ಕಲ್ಲಿನ ಚೂರುಗಳನ್ನು ರತ್ನಗಳೆಂದು ಕರೆಯುತ್ತಾರೆ. ಜಗತ್ತಿನಲ್ಲಿರುವ ರತ್ನಗಳು ಮೂರು— ನೀರು, ಅನ್ನ, ನೀತಿ." ಇದರಿಂದ ಮನುಷ್ಯನಿಗೆ ನೀರೂ ಅನ್ನವೂ ಎಷ್ಟು ಅಗತ್ಯವೋ ನೀತಿಯೂ ಅಷ್ಟು ಅಗತ್ಯವೆಂದು ಹೇಳಿದಂತಾಯಿತು.

ಇಷ್ಟು ಅಗತ್ಯವಾಗಿರುವದರ ಜೊತೆಗೆ ಅದು ಹೃದಯಂಗಮ ವಾಗಿಯೂ ಇರುವದೆಂಬುದನ್ನು ಮತ್ತೊಂದು ಶ್ಲೋಕವು ವರ್ಣಿಸುವ ದೇನೆಂದರೆ—

"ದ್ರಾಕ್ಷಾ ಮ್ಲಾನಮುಖೀ ಜಾತಾ; ಶರ್ಕರಾ ಚಾಶ್ಮತಾಂ ಗತಾ ।
ಸುಭಾಷಿತರಸಸ್ಯಾಗ್ರೇ ಸುಧಾ ಭೀತಾ ದಿವಂ ಗತಾ ॥"

ಎಂದರೆ ಈ ನೀತಿಯ ಮಾತುಗಳ ಮಾಧುರ್ಯದ ಮುಂದೆ ದ್ರಾಕ್ಷೆಯು ಸುಕ್ಕಿದ ಮುಖವುಳ್ಳದ್ದಾಯಿತು; ಸಕ್ಕರೆಯು ಕಲ್ಲಾಗಿ ಹೋಯಿತು; ಅಮೃತವು ಹೆದರಿಕೊಂಡು ಸ್ವರ್ಗಕ್ಕೆ ಹೋಯಿತು. ಇದ ರಿಂದ ನೀತಿವಚನಗಳು ಸಕ್ಕರೆಗಿಂತಲೂ ದ್ರಾಕ್ಷೆಗಿಂತಲೂ ಮಧುರವಾಗಿ ರುವವಲ್ಲದೆ ದೇವಲೋಕದಲ್ಲಿರುವ ಅಮೃತಕ್ಕಿಂತ ಮಿಗಿಲಾದವೆನಿಸಿ ದಂತಾಯಿತು. ಆದ್ದರಿಂದ ಇವಕ್ಕೆ ಎಲ್ಲರೂ ಬಾಯಿನೀರು ಸುರಿಸ ಬೇಕಾದದ್ದು ಸಹಜವಾಗಿದೆ.

ಮನುಷ್ಯನಾಗಿ ಹುಟ್ಟಿದ ಮೇಲೆ ತನ್ನ ಹುಟ್ಟನ್ನು ಸಾರ್ಥಕ ಮಾಡಿಕೊಳ್ಳುವದಕ್ಕೆ ನೀತಿಯು ಅಗತ್ಯವು. ಬರೀ ಅವುಗಳ ಜ್ಞಾನ ಮಾತ್ರವೇ ಅಲ್ಲ; ಪಾಕಶಾಸ್ತ್ರದ ಬರೀ ಜ್ಞಾನದಿಂದ ಪ್ರಯೋಜನವೇನು? ಅದರಂತೆ ಅಡಿಗೆಯನ್ನು ಮಾಡಿ ಉಂಡರಲ್ಲವೆ ತೃಪ್ತಿ? ಹಾಗೆಯೇ ನೀತಿ ಯನ್ನು ಆಚರಿಸಿದಾಗ ಅವುಗಳ ಬೆಲೆಯು ಫಲಾತಿಶಯವು ಕಾಣುವದು. ಎಷ್ಟೋ ಜನರು ಎಂಥೆಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಬಿಡದೆ ಅದನ್ನು ಅನುಭವಕ್ಕೆ ತಂದುಕೊಂಡು ತಮ್ಮ ಬುದ್ಧಿಶಕ್ತಿಯ ಸದುಪ ಯೋಗದಿಂದ ಕೀರ್ತಿಶರೀರಿಗಳಾಗಿ ಇತಿಹಾಸಪುರಾಣಗಳಲ್ಲಿ ಚಿರಜೀವಿ ಗಳಾಗಿರುವರು. ಪ್ರತಿಯೊಬ್ಬ ಮನುಷ್ಯನೂ ಆ ಸ್ಥಿತಿಯನ್ನು ತಾನೂ ಸಾಧಿಸುವದಕ್ಕೆ ತನ್ನ ಸರ್ವಸನ್ನಾಹವನ್ನೂ ಮಾಡಬೇಕು.



# ತಾಯ ಹೆಚ್ಚುಗಾರಿಕೆ

ಶಾಸ್ತ್ರವು ಭಗವಂತನ ಇರುವಿಕೆಯನ್ನು ಮನಗಾಣಿಸುವದಕ್ಕೆ ಹೊರಟಾಗ ಈ ಜಗತ್ತಿನ ಉತ್ಪತ್ತಿಗೂ ರಕ್ಷಣೆಗೂ ಕಾರಣನಾಗಿರುವವನೇ ಆವನೆಂದು ಭಗವಂತನನ್ನು ಕನ್ನಡಿಯಲ್ಲಿ ಕಾಣುವ ಗಂಟಾಗಿ ತೋರಿಸಿರುವದು. ಶಾಸ್ತ್ರದಂತೆ ಎಲ್ಲಾ ಜಗತ್ತಿನ ಉತ್ಪತ್ತಿಗೂ ರಕ್ಷಣೆಗೂ ಕಾರಣನಾದ ಒಬ್ಬ ಭಗವಂತನಿರಬಹುದು. ಅವನ ಮಾತಂತಿರಲಿ. ಉತ್ಪತ್ತಿಯೂ ರಕ್ಷಣೆಯೂ ಯಾರಿಂದಾಗುವದೊ ಅಲ್ಲಿ ಭಗವದ್ವಿಭೂತಿ ಇರುವದೆಂದು ಶಾಸ್ತ್ರವು ಸೂಚಿಸಿದಂತಾಯಿತು. ಈ ದೃಷ್ಟಿಯಿಂದ ನೋಡಿದರೆ ನಮ್ಮ ಉತ್ಪತ್ತಿಯೂ ರಕ್ಷಣೆಯೂ ನಮ್ಮ ತಾಯಿಯರಿಂದ ಆಗುವದು ನಮ್ಮೆಲ್ಲರ ಅನುಭವದಲ್ಲಿ ಇರುವದರಿಂದ ತಾಯಿಯು ಭಗವತ್ಸ್ವರೂಪವೆಂದು ತಾನಾಗಿ ಸಿದ್ಧವಾಯಿತು. ನಮ್ಮ ಉತ್ಪತ್ತಿಯ ಮತ್ತು ರಕ್ಷಣೆಯ ಸಾಮರ್ಥ್ಯವನ್ನು ಆ ತಾಯಿಯಲ್ಲಿ ಇಟ್ಟು ಆ ತಾಯಿಯೊಳಗೆ ಸೂತ್ರಧಾರಕವಾಗಿರುವ ಭಗವತ್ಸ್ವರೂಪವೊಂದು ಬೇರೆ ಇರಬಹುದು. ಆ ಸ್ವರೂಪವು ಹೆಚ್ಚಿನ ವಿಚಾರದಿಂದ ತಿಳಿಯತಕ್ಕದ್ದು. ಅಷ್ಟು ದೂರದವರೆಗೆ ನಮ್ಮ ದೃಷ್ಟಿಯನ್ನು ಹರಿಸುವದಕ್ಕೆ ಮುಂಚೆ ನಮ್ಮೆಲ್ಲರಿಗೂ ಕಣ್ಣಿಗೆ ಕಟ್ಟಿದಂತೆ ಮೊಟ್ಟಮೊದಲು ಕಾಣುವ ಭಗವತ್ಸ್ವರೂಪವು ತಾಯಿ. ಹತ್ತಿರದ ವಿಷಯಗಳ ಪರಿಚಯವನ್ನು ಮಾಡಿಕೊಂಡ ಮೇಲಲ್ಲವೆ ದೂರದ ವಿಷಯಗಳ ಮಾತು? ಆದ್ದರಿಂದ ತಾಯಿಯಲ್ಲಿ ಮೊದಲು ಭಗವತ್ಸ್ವರೂಪವನ್ನು ಕಂಡ ಮೇಲೆ ಆ ತಾಯಿಯಲ್ಲಿಯೂ ಅಂತರ್ಯಾಮಿಯಾಗಿರುವ ಭಗವತ್ಸ್ವರೂಪದ ಮಾತು. ಈ ನಿಯಮವನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಭಗವತ್ಸ್ವರೂಪವನ್ನು ಮನಗಾಣಿಸುವದಕ್ಕೆ ಹೊರಟ ವೇದವು ಮೊದಲು "**ಮಾತೃದೇವೋ ಭವ**" ಎಂದು ಉಪದೇಶವನ್ನು ಮಾಡಿರುವದು. "ತಾಯಿಯನ್ನು ಭಗವತ್ಸ್ವರೂಪವೆಂದು ತಿಳಿ"—ಎಂಬುದೇ ಅದರ ತಾತ್ಪರ್ಯ.

ಮನುಷ್ಯನು ತನ್ನ ಕರ್ಮದಿಂದ ತಾನು ಹುಟ್ಟುತ್ತಾನೆಂತಲೂ ಸರ್ವವ್ಯಾಪಿಯಾದ ಭಗವಂತನು ಅದರ ನಿಯಾಮಕನೆಂತಲೂ ಶಾಸ್ತ್ರದ ದೊಡ್ಡದೊಡ್ಡ ಮಾತುಗಳು ಹೇಳುವವು. ದೂರದೃಷ್ಟಿಯಿಂದ ನಿರ್ಣಯಿಸಿ ಹೇಳುವ ಆ ಮಾತಿರಲಿ. ತಾಯಿಯು ಮಗುವನ್ನು ಗರ್ಭದಲ್ಲಿ ಧರಿಸುವದು ಯಾರಿಗೆ ತಿಳಿಯದ ನೂತು? ತಾಯಿಯು ಸೃಷ್ಟಿಯ ನಿಯಮಕ್ಕೊಳಪಟ್ಟೇ ಗರ್ಭವನ್ನು ಧರಿಸಿದರೂ ಆಕೆಗೆ ಆ ಶಿಶುವಿನ ಮೇಲೆ ಅಂತರ್ಗುಂಭಿತವಾಗಿರುವ ಪ್ರೇಮವೂ ಆ ಪ್ರೇಮದ ಭರದಿಂದ ಆಕೆಯು ಸಹಿಸುವ ಶರೀರಶ್ರಮೆಯೂ ಎಲ್ಲರಿಗೂ ಕಣ್ಣಿಗೆ ಕಟ್ಟಿದಂತೆ ಕಾಣುವದು. ಆಕೆಯ ಶರೀರವೆಲ್ಲ ಭಾರವಾಗುವದು. ಆಕೆಯ ಬಣ್ಣವೇ ಬೇರೆಯಾಗುವದು. ಆಕೆಯು ಅನ್ನಪಾನಾದಿಗಳಲ್ಲಿ ಪಥ್ಯವನ್ನು ಮಾಡಬೇಕಾಗುವದು; ತನ್ನ ಇಂದ್ರಿಯಚಾಪಲ್ಯವನ್ನು ಬಿಗಿಹಿಡಿಯಬೇಕಾಗುವದು. ಇದೆಲ್ಲಾ ಬರೀ ಒಂದೆರಡು ದಿನಗಳ ಮಾತಲ್ಲ; ಒಂಬತ್ತು ತಿಂಗಳವರೆಗೂ ಒಂದೇ ರೀತಿಯಾಗಿ ಬಗೆಬಗೆಯ ಕಟ್ಟಿಗೊಳಪಟ್ಟಿರಬೇಕು. ತಾಯಿಗೆ ಇಷ್ಟೆಲ್ಲ ಆಯಾಸವು ಯಾರ ದೆಸೆಯಿಂದ? ಮಗುವಿನ ಮುದ್ದು ಮುಖವನ್ನು ನೋಡುವ ಸ್ವಾರ್ಥದ ಆವೇಶದಿಂದ ಆಕೆಯು ಇಷ್ಟೆಲ್ಲ ಸಹಿಸುವಳೆಂದರೂ ಮಗುವಿಗೆ ಇದರಿಂದ ಆದ ಉಪಕಾರವನ್ನು ಯಾರು ಇಲ್ಲವೆನ್ನಲಾದೀತು? ಆಕೆಯು ಅಷ್ಟಿಷ್ಟು ಅಪಥ್ಯಮಾತ್ರವನ್ನು ಮಾಡಿದರೂ ಮಗುವಿನ ಆರೋಗ್ಯಕ್ಕೆ ಏಷ್ಟೋ ಭಂಗ ಬರುವದು. ಇನ್ನು ಆಕೆ ಕಟ್ಟು ಹರಿದ ಪಂಜಿನಂತೆ ನಡೆದರಂತು ಮಗುವಿನ ದುರವಸ್ಥೆಗೆ ಪಾರವಿಲ್ಲದೆ ಹೋಗುವದು. ವಿವೇಕಿಗಳಾದ ತಾಯಿಯರು ಯಾವೂ ಹಾಗೆ ಮಾಡುವದಿಲ್ಲ. ಅಷ್ಟು ದೀರ್ಘಕಾಲ ಶಿಶುವನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡು ಅದರ ಯೋಗಕ್ಷೇಮದ ಭಾರವನ್ನು ಹೊತ್ತು ಒಳಗೇ ಅದರ ಪರಿಪುಷ್ಟಿಗೆ ತನ್ನ ರಕ್ತಮಾಂಸಗಳ ಬಲವನ್ನೆಲ್ಲ ಹಂಚಿಕೊಟ್ಟ ಉಪಕಾರಕ್ಕೆ ಏನು ಕೊಟ್ಟರೆ ತೀರೀತು? ಆದ್ದರಿಂದಲೇ ಜನ್ಮವೆತ್ತಿ ದೊಡ್ಡವನಾದ ಮೇಲೆ ಒಬ್ಬನು ವಿರಕ್ತನಾಗಿ ಉಳಿದ ಎಲ್ಲ ಬಾಂಧವರ ಸಂಬಂಧವನ್ನು ಕಿತ್ತೊಗೆಯಬಹುದಾದರೂ ತಾಯ ಸಂಬಂಧ

ವನ್ನು ಕಡಿದುಕೊಳ್ಳುವದಕ್ಕೆ ಮಾತ್ರ ಶಾಸ್ತ್ರವು ಅನುಮತಿಯನ್ನು ಕೊಡು ವದಿಲ್ಲ. ತನ್ನ ಪೂರ್ವಾಶ್ರಮದ ಗುರುಹಿರಿಯರಿಂದ ಕೂಡ ನಮಸ್ಕಾರ ವನ್ನು ಮಾಡಿಸಿಕೊಳ್ಳುವ ಸಂನ್ಯಾಸಿಯಾದರೂ ತಾಯ ಪಾದಧೂಲಿಯ ಮೇಲೆ ಬಿದ್ದು ಉರುಳಾಡಲೇ ಬೇಕು. ಶರೀರವಿರುವವರೆಗೂ ಯಾರಿಗೂ ತಾಯ ಸಂಬಂಧವು ಬಿಟ್ಟದ್ದಲ್ಲ. ಏಕೆಂದರೆ ಎಲ್ಲರಿಗೂ ಶರೀರಪುಷ್ಟಿಯು ತಾಯ ಗರ್ಭವಾಸದ ಆಶ್ರಯದಿಂದಲೇ ಆಗಿರುವದು.

ಹೆರಿಗೆಯ ಅಪಾಯವನ್ನು ಯೋಚನೆಗೆ ತಂದುಕೊಂಡರಂತು ಮೈ ಜುಮ್ಮೆನ್ನುವದು. ಈ ಸಮಯದಲ್ಲಿ ಅವರು ಭಯಂಕರವಾದ ಮೂರ್ಛೆಗೆ ಕೂಡ ಮೈಗೊಡಬೇಕಾಗುವದು ಮತ್ತು ಈ ಸಮಯದಲ್ಲಿ ತಮ್ಮ ಉಳಿಗಾಲಕ್ಕೆ ಅವರು ತಮ್ಮ ಪೂರ್ವಪುಣ್ಯವನ್ನೇ ಶರಣೆನ್ನಬೇಕಾಗಿರು ವದು. ಎಷ್ಟೇ ಸುಖಪ್ರಸವವಾದರೂ ಶಿಶುವಿನ ಜನನದ ಜೊತೆಯಲ್ಲಿ ಅವರು ತಮ್ಮ ಶಕ್ತಿಯ ಸರ್ವಸ್ವವನ್ನೂ ಕಳೆದುಕೊಳ್ಳುವರು. ಅವರ ಶರೀರಸೌಂದರ್ಯದ ಸರ್ವಸೌಭಾಗ್ಯವೂ ಆಗ ತನ್ನ ಕಳೆಯನ್ನು ಕಳೆದು ಕೊಳ್ಳುವದು. ಅವರ ಪ್ರಾಯವೆಲ್ಲ ಇದರಲ್ಲಿ ವೆಚ್ಚವಾಗಿ ಅವರ ಆಯು ರ್ದಾಯವೇ ಸಂಕೋಚಸ್ಥಿತಿಯನ್ನು ಪಡೆಯುವದು. ಸ್ತ್ರೀಯರ ಆಯು ರ್ಯೋಗವು ಸಾಮಾನ್ಯವಾಗಿ ಪುರುಷರದಕ್ಕಿಂತ ಕಡಿಮೆಯಾಗಿರುವ ದಕ್ಕೆ ಈ ಹೆರಿಗೆಯೇ ಬಹುಮಟ್ಟಿಗೆ ಕಾರಣವಾಗಿರುವದು. ಒಮ್ಮೆ ಅವರು ಒಂದು ಶಿಶುವನ್ನು ಹಡೆದ ಮೇಲೆ ಮತ್ತೆ ಅವರು ತಮ್ಮ ಪೂರ್ವಸ್ಥಿತಿ ಯನ್ನು ಪಡೆಯುವದು ಪುನರ್ಜನ್ಮಕ್ಕೆ ಸಮವಾಗಿರುವದು. ತಾಯಿಯು ಇಷ್ಟೆಲ್ಲ ಕಷ್ಟಕ್ಕೆ ಮೈಗೊಟ್ಟದ್ದನ್ನು ಮರೆಯುವದು ಎಂಥ ನಿರ್ದಯದ ಮಾತು! ತಾಯಿಯು ಈ ಅಪಾಯವನ್ನು ಮಕ್ಕಳಿಗಾಗಿಯೇ ಸಹಿಸಲಿ ಅಥವಾ ತನ್ನ ಸ್ವಭಾವದಂತೆ ಅನುಭವಿಸಲಿ; ಶಿಶುವಿನ ತಲೆಯ ಮೇಲೆ ಬಿದ್ದ ಈ ಉಪಕಾರವನ್ನು ಯಾರೂ ಅಲ್ಲವೆನ್ನುವದಕ್ಕಿಲ್ಲ.

ಮಗುವಿನ ಮುಖವನ್ನು ನೋಡುವದಕ್ಕೆ ಮುಂಚೆಯೇ ತಾಯಿಗೆ ಇಷ್ಟು ಕ್ಲೇಶಗಳು. ಮಗು ಹುಟ್ಟಿದ ಮೇಲೆಯೂ ಕೂಡ ತಾಯಿಗೆ

ಎಷ್ಟೋ ಕಾಲ ಎಷ್ಟೋ ಬಗೆಯ ಕಷ್ಟಗಳು ತಪ್ಪಿದ್ದೇ ಅಲ್ಲ. ಹುಟ್ಟಿದ ಮಗುವಿಗೆ ಎಷ್ಟೋ ದಿನಗಳವರೆಗೂ ತಾಯ ಹಾಲಿನ ಹೊರತು ಎರಡನೆಯ ಜೀವನವೇ ಇಲ್ಲ. ಹೀಗೆ ಬೆಳೆಯುವ ಮಗುವಿನ ಬಗೆಬಗೆಯ ಅಶುಚಿಗಳನ್ನೆಲ್ಲ ತಾಯಿಯು ಎಷ್ಟು ಮಾತ್ರವೂ ಮುಖವನ್ನು ಸೊಟ್ಟ ಮಾಡದೆ ಸೈರಿಸುವಳು. ಭೂಮಿಗಿಂತ ಶ್ರೇಷ್ಠವಾದದ್ದು ಯಾವದೆಂದು ಯಕ್ಷನು ಪ್ರಶ್ನೆ ಮಾಡಿದಾಗ ಧರ್ಮರಾಯನು ತಾಯಿಯೆಂದು ಉತ್ತರವನ್ನು ಕೊಟ್ಟಿರುವದು ಈ ಸಮಯಕ್ಕೆ ಚೆನ್ನಾಗಿ ಒಪ್ಪುತ್ತದೆ. ಭೂಮಿಯು ನಮ್ಮ ಯಾವ ಬಗೆಯ ಅಶುಚಿಗೂ ಅಸಹ್ಯಪಡದೆ ನಮ್ಮನ್ನು ಹೊತ್ತುಕೊಂಡಿರುವಂತೆ ತಾಯಿಯು ಮಗುವಿನ ಯಾವ ಬಗೆಯ ಅಶುಚಿಗೂ ಅಸಹ್ಯಗೊಳ್ಳದೆ ಯಾವಾಗಲೂ ಶಿಶುವನ್ನು ಎತ್ತಿಕೊಂಡಿರುವಳು. ಮಗುವು ಶರೀರಸ್ವಾತಂತ್ರ್ಯವಿಲ್ಲದೆ ವಿವೇಕದ ಅಭಾವದಿಂದ ಬೆಂಕಿ, ನೀರು—ಮೊದಲಾದ ಅಪಾಯಗಳಿಗೆ ತುತ್ತಾಗುವ ಸ್ಥಿತಿಯಲ್ಲಿರುವಾಗ ಅದನ್ನು ಕಾಪಾಡುವದಕ್ಕೆ ದೇವರು ಎಲ್ಲಿಂದ ಓಡಿ ಬರುತ್ತಾನೆ? ಬೇರೊಬ್ಬನಿದ್ದರಲ್ಲವೆ ಎಲ್ಲಿಂದಲಾದರೂ ಬರುವದು? ಈ ಸಂದರ್ಭದಲ್ಲಿ ನಮ್ಮ **ಪರಮಾತ್ಮಸ್ತುತಿ**ಯು ನಮ್ಮ ಕಣ್ಣ ಪರೆಯನ್ನು ತೆಗೆದು ಹೇಳಿರುವದೇನೆಂದರೆ—

ಭಾ ॥ ಬೆಂಕಿಯಲಿ ಬೀಳ್ವಾಗ, ಮೇಣ್ವಿ ।
ಶ್ಯಂಕೆಯಿಂ ವಿಷವೀಂಟುವಾಗಾ ।
ತಂಕವಿಲ್ಲದೆ ನೀರಿನೊಳು ಮುಳುಗಲ್ಕೆ ಹೋದಾಗ, ॥
ನೀಂ ಕರುಣದಿಂ ಮಾತೃರೂಪದಿ ।
ಸಂಕಟಗಳಿಂ ಪಾರುಮಾಡಿ ಸು ।
ಖಂಕರನು ತಾನೆನಿಸಿದುದ ನಾನೆಂತು ಮರೆಯುವೆನು? ॥

ಬಸುರಿನಿಂದ ಹೊರಬಿದ್ದ ಮಗು ಕ್ರಮಕ್ರಮವಾಗಿ ಮುಂದೆ ತನ್ನ ಗತಿಯೇನೆಂಬ ಕಲ್ಪನೆಯಿಂದ ದಿಕ್ಕುದಿಕ್ಕುಗಳನ್ನು ನೋಡುವಾಗ ಅದಕ್ಕೆ ಹೊಣೆಯಾಗಿ ಕಾಣುವ ವಸ್ತು ತಾಯಿಯಲ್ಲದೆ ಬೇರೆ ಯಾರಿದ್ದಾರೆ? ಮಗು ಹುಟ್ಟುವದಕ್ಕೆ ಮುಂಚೆ ಮಗುವಿನ ಆಹಾರಕ್ಕಾಗಿ ತಾಯ ಎದೆಯಲ್ಲಿ

ಹಾಲಿನ ಒರತೆಯನ್ನಿಟ್ಟ ಭಗವಂತನೆಲ್ಲಿಯೋ ಯಾರಿಗೂ ಕಾಣುವದಿಲ್ಲ. ಆ ಹಾಲಿನಿಂದ ತುಂಬಿದ ಚಿನ್ನದ ಗಿಂಡಿಯನ್ನು ಮಗುವಿನ ಬಾಯೊಳಕ್ಕೆ ಊಡುವ ತಾಯ ಪರಿಚಯವೇ ಮಗುವಿಗೆ ಮೊದಲನೆಯದು. ಇಷ್ಟೇ ಅಲ್ಲ; ಮಗು ಮೊದಲು ಕಲಿಯುವ ಮಾತು ಯಾವದು? "ಅಮ್ಮ" ಎನ್ನುವದೇ. ಹೀಗೆ ಪ್ರಾಣಿಗಳಿಗೆ ಮೊದಲನೇ ದಿಕ್ಕು ತಾಯಿ. ಆದ್ದರಿಂದ ಹಿರಿಯರು "**ನ ಮಾತುಃ ಪರದೈವತಮ್**" ಎಂದಿರುವರು. ತಾಯಿಗಿಂತ ಹೆಚ್ಚಿನ ದೇವರಿಲ್ಲವೆಂದು ಅದರ ಅರ್ಥ. ಇದೇ ಅಭಿಪ್ರಾಯವನ್ನೇ "ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿ ಇಲ್ಲ" ಎಂಬ ಗಾದೆಯೂ ಸೂಚಿಸುವದು.

ತಾಯ ಬಂಧುತ್ವದ ಬೆಡಗನ್ನು ನಮ್ಮ **ಪರಮಾತ್ಮಸ್ತುತಿಯು** ವರ್ಣಿಸಿರುವದೇನೆಂದರೆ—

**ಭಾ ॥ ಕುಡಿವೆನೆನೆ ಸವಿಯಾಗೆ ಮೊಲೆವಾ ।**
**ಲ್ಗುಡಿಸಿ; ಮೇಣಾಲಿಸುವೆ ನಾನೆನ ।**
**ಲೊಡನೆ ಸವಿನುಡಿಯಿಂದಲೆನ್ನನು ನುಡಿಸುತಾದರಿಸಿ, ॥**
**ಬಿಡದೆ ನಿದ್ರಿಪೆನೆನಲು ಸವಿಯಿಂ ।**
**ದೊಡೆವೆರೆದ ನಿದ್ರಾಸುಖವನಿ ।**
**ತ್ತುಡಿಗಡಿಗೆ ನನ್ನನ್ನು ಪೊರೆದಾ ತಾಯಿ ನೀನಲ್ತೆ! ॥**

**ತೊಡೆಯನೇರಿಸಿಕೊಂಡು, ಸಂಶಯ ।**
**ಪಡದೆ ನನ್ನಿಂದಾಗುವಶುಚಿಗೆ, ।**
**ಸಡಗರದ ಸವಿಮಾತಿನಿಂದುಪಚಾರಮಾಡುತ್ತ, ॥**
**ತಡಹುತೆನ್ನನು ಕೈಗಳಿಂದೆಡೆ ।**
**ವಿಡದೆ ಲಾಲಿಸುವಾಗ ನನಗೀ ।**
**ಪೊಡವಿಯೊಳ್ನೀನಲ್ಲದಿನ್ನೇನಿತ್ತು ಯೋಚಿಸಲು? ॥**

**ನಿನ್ನ ತೊಡೆಗಳನೇರಿ ಕುಳಿತಿ ।**
**ರ್ದೆನ್ನ ಮನವಿಮಾಲೋಕವಮಂ ವಿಾ ।**
**ರ್ದುನ್ನತದ ಲೋಕಗಳ ಮೇಲೇರ್ದಂತೆ ಭಾವಿಸಿ ಮೇಣ್ ॥**

ಇನ್ನು ಶಿವನ ಜಟಾಗ್ರದೆಡೆಯೊಳು ।
ತಣ್ಣಗಿಹ ಚಂದ್ರಮನ ಬಿಂಬವು ।
ಮೆನ್ನ ಕೈಗತಿಸುಲಭದಲಿ ಬಹುದೆನುತ ಯೋಚಿಸಿತು ॥
ನೋಡೆ ಹೊಲಸಾದೆನ್ನ ಮುಖವನು ।
ನೋಡಿ ನೋಡುತ, ಪೂರ್ಣಚಂದ್ರನ ।
ನೋಡಿದಂತಾನಂದದನುಭವವನ್ನು ತೋರುತ್ತ, ॥
ಗಾಢಮಮತೆಯೊಳೆನ್ನ ಮುದ್ದಿಸಿ, ।
ಪಾಡುತಲಿ ಹರ್ಷದಲಿ ಕಿರುನಗೆ ।
ಮೂಡೆ ತೋರಿದ ನಿನ್ನ ಬಗೆಗಿನ್ನಾವುದೆಣೆ ಜಗದೊಳ್? ॥

ತಾಯಿಯು ಮಗುವಿನ ಶರೀರಕ್ಕೆ ಕಾರಣಳಾಗಿರುವದಂತು ಎಲ್ಲರಿಗೂ ಪ್ರತ್ಯಕ್ಷವಾಗಿದೆಯಷ್ಟೆ. ಆ ತಾಯಿಯ ಪ್ರಭಾವವಿಷ್ಟೇ ಅಲ್ಲ. ಆಕೆ ಮನುಷ್ಯನ ಮನಸ್ಸಿಗೂ ಕಾರಣಳು. ಹೇಗೆಂದರೆ ಮನಸ್ಸು ಆಹಾರದಿಂದ ಆಗುವದೆಂದು ಶಾಸ್ತ್ರಜ್ಞರು ಸಿದ್ಧಮಾಡಿರುವರು. ಮಕ್ಕಳಿಗೆ ತಾಯ ಹಾಲೇ ಆಹಾರವಾಗಿರುವದು. ಆದ್ದರಿಂದ ಮಕ್ಕಳ ಮನಸ್ಸಿಗೂ ತಾಯೇ ಕಾರಣಳಾದಳು. ಮಕ್ಕಳು ದೊಡ್ಡವರಾದ ಮೇಲೆ ತಮಗೆ ಬೇಕುಬೇಕಾದ ಬಗೆಬಗೆಯ ಆಹಾರಗಳನ್ನುಂಡು ಮನಸ್ಸನ್ನು ಬಗೆಬಗೆಯಾಗಿ ಎಷ್ಟೇ ಮಾರ್ಪಡಿಸಿಕೊಂಡರೂ ಬಾಲ್ಯದಲ್ಲಿ ಅದನ್ನು ಪರಿಪುಷ್ಟಿಗೊಳಿಸಿದ ಶ್ಲಾಘನೆಯು ತಾಯಿಗೆಂದಿಗೂ ತಪ್ಪುವದಿಲ್ಲ. ಹೀಗೆ ಶರೀರವೂ ಮನಸ್ಸೂ ಎರಡೂ ತಾಯಿಯಿಂದ ರೂಪುಗೊಂಡಂಥವುಗಳಾದ್ದರಿಂದ ಮನುಷ್ಯನಲ್ಲಿ ತಾಯದಲ್ಲದ ಸ್ವತ್ವವೇನೇನೂ ಉಳಿದಿಲ್ಲವೆನ್ನಬೇಕಾಗುವದು. ಇದರಿಂದ ಶರೀರದ ಸೇವೆಗೆ ಕೈಕಾಲುಗಳು ಹೇಗೊ ಹಾಗೆ ಮನುಷ್ಯನು ತಾಯ ಸೇವೆಗಾಗಿ ಇರುವ ಒಂದು ಉಪಕರಣಪ್ರಾಯನೆಂದು ಹೇಳಿಸಿಕೊಳ್ಳುವದಕ್ಕೆ ತಕ್ಕವನಾಗಿರುವನು.

ತಾಯಿಯರ ಪ್ರೇಮಾತಿಶಯದ ಉಪಕಾರವು ಬರೀ ಚಿಕ್ಕಂದಿನಲ್ಲಿ ಮಾತ್ರವೇ ಅಲ್ಲ. ಮಗನು ಎಷ್ಟೇ ದೊಡ್ಡವನಾದರೂ ಮಗನು ಮಗನೆ; ತಾಯಿಯು ತಾಯಿಯೆ. ಮನುಷ್ಯನು ವಿವಾಹಿತನಾದ ಮೇಲೆಯೂ—ಅವನು ತನ್ನ ಮನಸ್ಸನ್ನು ಆ ತನ್ನ ಸ್ತ್ರೀಗೆ ಎಷ್ಟೇ

ಮಾರುಗೊಟ್ಟಿದ್ದರೂ— ತಾಯ ಪ್ರೇಮದ ಪರಿಣಾಮವು ಅವನಿಗೆ ತನ್ನ ಉತ್ಕೃಷ್ಟತೆಯನ್ನು ತೋರಿಸದೆ ಹೋಗುವದೇ ಇಲ್ಲ. ಮನುಷ್ಯನು ತನ್ನ ಪ್ರಾಯದ ಭರದಲ್ಲಿ ತನ್ನ ಸಹಧರ್ಮಿಣಿಯನ್ನು ಎಷ್ಟೇ ಬಹುಮಾನಿಸಿದರೂ ಅವನಲ್ಲಿ ವಿವೇಕವು ತಲೇ ಎತ್ತಿದಾಗ ಅವನಿಗೆ ತಾಯ ಹೆಚ್ಚುಗಾರಿಕೆಯು ತೋರಲೇ ಬೇಕು. ಶ್ರೀರಾಮಚಂದ್ರನು ತನಗೆ ಅನುರೂಪಳಾದ ಸೀತೆಯನ್ನು ಮದುವೆಯಾದ ಮೇಲೆ ಆಕೆಯೊಡನೆ ತನ್ನ ತಾಯಿ ತಂದೆಗಳ ಆಧಿಪತ್ಯದ ಕೆಳಗೆ ಎಷ್ಟೋ ದಿವಸ ಅರಮನೆಯಲ್ಲಿ ವಿಹಾರ ಮಾಡಿಕೊಂಡಿದ್ದನು. ಆಮೇಲೆ ಅವನು ವನವಾಸಕ್ಕೆ ಹೋಗುವಾಗಲೂ ಸೀತೆಯನ್ನು ಸಂಗಡ ಕರೆದುಕೊಂಡೇ ಹೋಗಿದ್ದನು. ಅರಣ್ಯದಲ್ಲಿ ತನ್ನ ಮನಸ್ಸನ್ನು ಉಲ್ಲಾಸಗೊಳಿಸುವದಕ್ಕೆ ಸೀತೆಯು ಒಡನಾಡಿಯಾಗಿದ್ದರೂ ಶ್ರೀರಾಮನು—

"ಮಾತೃಭಿಶ್ಚಿನ್ತ್ಯಮಾನಾನಾಂ ತೇ ಹಿ ನೋ ದಿವಸಾ ಗತಾಃ"

ಎಂಬ ಮಾತಿನಿಂದ "ತನ್ನ ತಾಯಿಯರು ತನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ ದಿನಗಳು ಕಳೆದವಲ್ಲ!" ಎಂದು ಹಂಬಲಿಸಿಕೊಂಡಿರುವನು. ಮದುವೆಯಾದ ದಂಪತಿಗಳ ಪರಸ್ಪರ ಪ್ರೇಮವು ನಡುವೆ ಬಂದದ್ದು; ತಾಯಿಮಕ್ಕಳ ಪ್ರೇಮವು ಜನ್ಮಕ್ಕೆ ಹತ್ತಿದ್ದು. ಪತ್ನಿಯ ಪ್ರೀತಿಯು ಸ್ವಸುಖಾಭಿಲಾಷೆಯ ಮೂಲಕವಾದದ್ದು; ತಾಯ ಪ್ರೀತಿಯು ನಿರುಪಾಧಿಕವಾದದ್ದು. ಈ ಅರ್ಥಕ್ಕೊಂದು ಕಟ್ಟುಕಥೆಯು ಚೆನ್ನಾಗಿ ಒಪ್ಪುತ್ತದೆ. ಇಬ್ಬರು ಸವತಿಯರಲ್ಲಿ ಒಬ್ಬಳ ಹೊಟ್ಟೆಯಲ್ಲಿ ಒಂದು ಮಗು ಹುಟ್ಟಿತ್ತು. ಇನ್ನೊಬ್ಬಳಿಗೆ ತಾನು ಬಂಜೆಯಾಗಿದ್ದರೂ ಪುತ್ರವತಿಯೆನಿಸಿಕೊಳ್ಳಬೇಕೆಂಬ ಉತ್ಕಟವಾದ ಚಾಪಲ್ಯಮಾತ್ರವಿತ್ತು. ಒಂದು ದಿನ ಈ ಎರಡನೆಯವಳು ತಾನೇ ಆ ಕೂಸಿನ ನಿಜವಾದ ತಾಯಿಯೆಂದು ಹೇಳಿ ಅದನ್ನು ಮೊದಲನೆಯವಳಿಗೆ ಕೊಡದೆಹೋದಳು. ಈ ಜಗಳವು ಹೇಗೋ ನ್ಯಾಯಾಧಿಪತಿಯ ಮುಂದಕ್ಕೆ ಬಿತ್ತು. ನಿಜವಾದ ತಾಯಿಯನ್ನು ಕಂಡುಹಿಡಿಯಬೇಕೆಂಬ ಉದ್ದೇಶದಿಂದ ನ್ಯಾಯಾಧಿ

ಪತಿಯು ಆ ಕೂಸನ್ನು ಎರಡಾಗಿ ಸೀಳಿ ಅವರಿಬ್ಬರಿಗೂ ಒಂದೊಂದು ತುಂಡನ್ನು ಕೊಟ್ಟುಬಿಡಿರೆಂದು ಭಟರಿಗೆ ಆಜ್ಞಾಪಿಸಿದನು. ಆಗ ನಿಜವಾದ ತಾಯಿಯು ತನ್ನ ಕೂಸು ಎಲ್ಲಿಯಾದರೂ ಬದುಕಿಕೊಂಡರೆ ಸಾಕೆಂದು "ಮಹಾಸ್ವಾಮಿ, ಈ ಕೂಸಿಗೆ ಅವಳೇ ತಾಯಿಯು; ಪೂರ್ಣವಾದ ಕೂಸನ್ನು ಅವಳಿಗೇ ಕೊಟ್ಟುಬಿಡಿ" ಎಂದು ನ್ಯಾಯಾಧಿಪತಿಗೆ ಹೇಳಿದಳು. ಹೀಗೆ ತಾಯ ಪ್ರೀತಿಯು ಸ್ವಾರ್ಥದ ಗಂಧವಿಲ್ಲದೆ ಶುದ್ಧವಾಗಿರುವದು.

"ಅಜ್ಜಿ ಸಾಕಿದ ಮಗು ಯಾವ ಕಜ್ಜಕ್ಕೂ ಬಾರದು" ಎಂಬದೊಂದು ಗಾದೆಯುಂಟು. ಇದರಿಂದ ತಾಯ ಶಿಕ್ಷಣೆಯಲ್ಲಿ ಬೆಳೆದವರಿಗೆ ವ್ಯವಹಾರದಲ್ಲಿ ನಿಪುಣತೆಯು ಕೊರತೆಯಾಗುವದೆಂದು ತೋರುವದು. ಈ ಅಭಿಪ್ರಾಯವು ಕೇವಲ ಸ್ಥೂಲದೃಷ್ಟಿಯದಾಗಿರುವದು. ಒಳಹೊಕ್ಕು ನೋಡಿದರೆ ತಾಯ ಉಪದೇಶದಿಂದ ಎಲ್ಲ ವ್ಯವಹಾರನಿಪುಣರ ತಲೆಯನ್ನು ಮೆಟ್ಟಿ ಹಾರುವ ಯೋಗ್ಯತೆಯು ಒಂದೇ ಸಲಕ್ಕೆ ಬಂದ ಉದಾಹರಣೆಗಳುಂಟು. ಧ್ರುವನ ಉದಾಹರಣೆಯನ್ನು ನೋಡಿ. ಲೌಕಿಕವಾದ ನಿಪುಣತೆಯನ್ನು ಉಪಯೋಗ ಮಾಡಿಕೊಂಡಿದ್ದರೆ ಧ್ರುವನು ಉತ್ತಾನಪಾದರಾಯನ ತೊಡೆಯ ಮೇಲಕ್ಕೆ ಮಾತ್ರ ಏರಬಹುದಾಗಿತ್ತು. ಆದರೆ ತಾಯಿಯು ತನ್ನ ಮಗನ ಲಕ್ಷ್ಯವನ್ನು ಭಗವಂತನ ಕಡೆಗೆ ತಿರುಗಿಸಿದ್ದರಿಂದ ಅವನು ಜ್ಯೋತಿಶ್ಚಕ್ರಕ್ಕೆಲ್ಲ ಅಧಿಪತಿಯೆಂಬ ಮಹೋನ್ನತಪದವಿಯನ್ನು ಪಡೆದನು. ಆ ಪದವಿಯ ಮಹತ್ತ್ವದ ಮುಂದೆ ಕ್ಷುದ್ರವಾದ ಉತ್ತಾನಪಾದರಾಯನ ತೊಡೆ ಯಾವ ಕೆಲಸಕ್ಕೂ ಬರುವದಿಲ್ಲ. ತಾಯಿಯು ಅಕ್ಕಿಯ ಹಿಟ್ಟನ್ನು ಕದರಿ ಹಾಲೆಂದು ಕೊಟ್ಟದ್ದನ್ನು ಕುಡಿಯುತ್ತಿದ್ದ ಉಪಮನ್ಯು ಒಮ್ಮೆ ಒಂದು ಕಡೆ ನಿಜವಾದ ಹಾಲನ್ನು ಕುಡಿದು ಅದನ್ನೆ ಮತ್ತೆ ಬಯಸಿ ಕಾಡಿದಾಗ ಆ ತಾಯಿಯು ತನ್ನ ವ್ಯವಹಾರದ ನಿಪುಣತೆಯನ್ನು ಉಪಯೋಗಿಸಿದ್ದರೆ ಹೇಗೊ ಆ ಹಾಲನ್ನು ಪಡೆಯಬಹುದಾಗಿತ್ತು. ಆದರೆ ಆಕೆ ತನ್ನ ಮಗನ ಮುಂದೆ ಭಗವಂತನ ಕಡೆಗೆ ಬೆಟ್ಟು ಮಾಡಿ ತೋರಿಸಿದ್ದರಿಂದ ಉಪ

ಮತ್ತು ಕ್ಷೀರಸಾಗರಕ್ಕೇ ಅಧಿದೇವತೆಯಾದನು. ತಾಯಿಯರು ವ್ಯವಹಾರಚಾತುರ್ಯವನ್ನು ಬೆಳೆಸದಿದ್ದರೂ ಸರ್ವವ್ಯವಹಾರಚಾತುರ್ಯ ವನ್ನೂ ನುಂಗಿ ನೀರು ಕುಡಿಯುವಂಥ ಭಗವದ್ಭಕ್ತಿಯ ಹೆಬ್ಬಾಗಿ ಲನ್ನು ತೆರೆದುಬಿಡುವರು. ಇದರಿಂದ ಮಕ್ಕಳಿಗೆ ಸರ್ವಾಧಿಕವಾದ ಸಂಪತ್ತು ದೊರೆಯುವದು.

ತಾಯಿಯಿಂದಲೇ ವ್ಯವಹಾರನಿಪುಣತೆಯು ಬಂದದ್ದಕ್ಕೆ ಕೂಡ ದೃಷ್ಟಾಂತ ಉಂಟು. ಶಿವಾಜಿಮಹಾರಾಜನಿಗೆ ಚಿಕ್ಕಂದಿನಲ್ಲಿಯೇ ಕೋಟೆಕೊತ್ತಲಗಳ ಮೇಲೆ ಕಣ್ಣು ಬಿದ್ದದ್ದಕ್ಕೆ ಅವನ ತಾಯಿಯ ನಡೆ ವಳಿಕೆಯೇ ಕಾರಣವೆಂದು ಇತಿಹಾಸಜ್ಞರು ಹೇಳುವರು. ವೀರ ಪತ್ನಿಯಾದ ಜೀಜಾಬಾಯಿಯು ಶಿವಾಜಿಯನ್ನು ಗರ್ಭದಲ್ಲಿ ಧರಿಸಿ ದಂದಿನಿಂದಲೂ ವೀರಶ್ರೀಯ ಕನವರಿಕೆಯನ್ನೇ ಹೊಂದಿದ್ದರಿಂದ ಆಕೆಯು ವೀರಮಾತೆಯೆನಿಸಿಕೊಳ್ಳುವಂತೆ ಶಿವಾಜಿಯು ತನ್ನ ವೀರತ್ವ ವನ್ನು ತೋರಿಸಿರುವನು. ಜೀಜಾಬಾಯಿಯ ಕಣ್ಣು ಶತ್ರುರಾಜರ ಕೋಟೆಗಳ ಮೇಲೆಯೇ ಹಾಯುತ್ತಿದ್ದದರಿಂದ ಶಿವಾಜಿಯ ಕಣ್ಣೂ ಅದೇ ದಾರಿಯನ್ನೇ ಹಿಡಿಯಿತು.

ಹೀಗೆ ತಾಯಿಗೆ ಸಮಾನವಾದ ವಸ್ತು ಜಗತ್ತಿನಲ್ಲಿ ಇನ್ನೊಂದಿ ಲ್ಲವಾದ್ದರಿಂದ ತಾಯಿಯನ್ನು ಭಗವತ್ಸ್ವರೂಪವೆಂದು ಭಾವಿಸಿ ನಡೆದು ಕೊಳ್ಳುವದು ಶ್ರೇಯಸ್ಕರವು. ಒಂದು ವೇಳೆ ತಾಯಿಯರು ನಿಷ್ಠುರ ವನ್ನು ತೋರಿಸಿದರೂ ವಿವೇಕಿಗಳು ಅದನ್ನು ಮರೆತು ತಮ್ಮ ಸೌಜನ್ಯ ವನ್ನೇ ತೋರಿಸಬೇಕು. ತನ್ನ ಮನಸ್ಸಿನಂತೆಯೇ ನಡೆದರೆ ಮಾತ್ರ ತಾಯಿಯೆಂದು ಗೌರವಿಸುತ್ತ ತನ್ನ ಅಭಿಪ್ರಾಯಕ್ಕೆ ಭಿನ್ನವಾದೊ ಡನೆಯೇ ಆಕೆಯನ್ನು ಕಡೆಗಾಣುವದು ಅನುಚಿತವು. ನಮ್ಮ ಮನ ಸ್ಸಿಗೆ ಅನುಕೂಲರಾಗಿರಲಿ, ಪ್ರತಿಕೂಲರಾಗಿರಲಿ; ತಾಯಿಯರು ತಾಯಿ ಯರೇ; ಮಕ್ಕಳು ಮಕ್ಕಳೇ. ತಾಯಿಯ ಋಣವನ್ನು ಲಕ್ಷ್ಯದಲ್ಲಿ ಟ್ಟುಕೊಂಡು ತಾಯಿಯಲ್ಲಿ ಭಗವತ್ಸ್ವರೂಪದ ಭಾವನೆಯನ್ನು ಕದಲ ಗೊಡಬಾರದು. ಕೌಸಲ್ಯೆಯೆಂಬ ಹಿರಿಯಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ತನ್ನ ಹೊಟ್ಟೆಯಲ್ಲಿ

ಹುಟ್ಟಿದ ಭರತನಿಗೆ ಪಟ್ಟವನ್ನು ಕಟ್ಟಬೇಕೆಂದು ಕಿರಿಯ ಹೆಂಡತಿಯಾದ ಕೈಕಯಿಯು ಗಂಡನಾದ ದಶರಥನನ್ನು ಮಾತಿಗೆ ಸಿಕ್ಕಿಸಿಕೊಂಡಳಷ್ಟೆ. ಅದರಂತೆ ನಡೆದ ಸಂದರ್ಭದಲ್ಲಿ ಭರತನೂ ಲಕ್ಷ್ಮಣನೂ ಕೈಕಯಿಯನ್ನು ನಿಂದಿಸುವದಕ್ಕೆ ನಾಲಿಗೆಯನ್ನು ಎತ್ತಿದಾಗ ಶ್ರೀರಾಮಮೂರ್ತಿಯು ಅವರಿಬ್ಬರನ್ನೂ ತಡೆದು ಅವರಿಗೆ ವಿವೇಕವನ್ನು ಉಪದೇಶಮಾಡಿದ್ದಾನೆ. ಕೈಕಯಿಯು ತನಗೆ ಮಲತಾಯಿಯಾಗಿದ್ದರೂ ಕೂಡ ಶ್ರೀರಾಮಚಂದ್ರನು ಆಕೆಯಲ್ಲಿ ಕೊನೆಯವರೆಗೂ ಭಗವದ್ಭಾವನೆಯನ್ನೇ ಕಾಪಾಡಿಕೊಂಡು ಬಂದಿರುವದು ನಮಗೆ ಅನುಕರಣೀಯವಾಗಿದೆ.

ತಾಯಿಯಲ್ಲಿ ಅನಾದರವನ್ನು ತೋರಿಸದೆ ಇರುವದಿಷ್ಟೇ ಅಲ್ಲ. ದೊಡ್ಡದೊಡ್ಡವರೆಲ್ಲರೂ ಯಾವ ವಿಧದಲ್ಲಿಯೂ ತಾಯಿಯರ ಮನಸ್ಸು ಖಿನ್ನವಾಗದಂತೆ ನಡೆದಿರುತ್ತಾರೆ. ತಾಯಿಗೆ ನಿಟ್ಟುಸಿರನ್ನು ಬಿಡಿಸಿದರೆ ಅದರ ಬಿಸಿಯು ಮನುಷ್ಯನ ಸರ್ವಸೌಭಾಗ್ಯವನ್ನೂ ಸುಟ್ಟು ಬೂದಿ ಮಾಡಿಬಿಡುವದೆಂದು ಅವರಿಗೆ ಹೆದರಿಕೆ. ಶ್ರೀ ಶಂಕರಾಚಾರ್ಯರಿಗೆ ಸಂನ್ಯಾಸದಲ್ಲಿ ಬಹು ಬಲವತ್ತರವಾದ ಇಚ್ಛೆಯಿತ್ತಾದರೂ ತಾಯ ಸಮ್ಮತಿಯು ದೊರೆಯುವವರೆಗೂ ಅವರು ಮುಂದೆ ಹೆಜ್ಜೆಯನ್ನಿಡಲಿಲ್ಲ. ಇಷ್ಟೇ ಅಲ್ಲ; ಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಗೆ ಬರುವದು ಸಂಪ್ರದಾಯಕ್ಕೆ ವಿರೋಧವಾದರೂ ತಮ್ಮ ತಾಯಿಗಾಗಿ ಬಂದು ತಾಯಿಗೆ ಗತಿಯನ್ನು ಕಾಣಿಸಿ ತಮ್ಮ ಮಾತೃಭಕ್ತಿಯನ್ನು ಪೂರ್ಣಮಾಡಿ ಕೃತಾರ್ಥರಾಗಿರುವರು. ಶ್ರೀ ಮಧ್ವಾಚಾರ್ಯರು ಕೂಡ ತಮ್ಮ ತಾಯಿಯು ಮಕ್ಕಳಿಲ್ಲದೆ ಕಾಲವನ್ನು ಕಳೆಯಲಾರದಿರುವದನ್ನು ಕಂಡು ಆಕೆಯ ಮನಸ್ಸು ನೋಯುವದಕ್ಕೆ ಅವಕಾಶವನ್ನು ಕೊಡಬಾರದೆಂದು ಆಕೆಗೆ ಮತ್ತೊಂದು ಗಂಡು ಮಗುವಾಗುವವರೆಗೂ ತಾವು ಆಶ್ರಮಾಂತರವನ್ನು ಪಡೆಯುವದಕ್ಕೆ ದುಡುಕದೆ ಮಾತೃಪ್ರೇಮವನ್ನು ಕೊನೆಯವರೆಗೂ ಉಳಿಸಿಕೊಂಡಿರುತ್ತಾರೆ. ಹೀಗೆ ತಾಯಮನಸ್ಸಿಗೆ ನೋವಾಗದಂತೆ ನಡೆಯುವದಕ್ಕೆ ಪ್ರತಿಯೊಬ್ಬನೂ ಪ್ರಯತ್ನವನ್ನು ಮಾಡಬೇಕು.

ತಾಯ ಮನಸ್ಸಿಗೆ ನೋವಾಗದಂತೆ ನೋಡಿಕೊಳ್ಳುವದಿಷ್ಟೇ ಅಲ್ಲದೆ ತಾಯ ಮಾತಿಗೆ ವೇದವಾಕ್ಯಕ್ಕಿಂತಲೂ ಹೆಚ್ಚಿನ ಬೆಲೆಯನ್ನು ಕೊಟ್ಟಿರುವದಕ್ಕೆ ಪಾಂಡವರ ಉದಾಹರಣೆಯು ಚೆನ್ನಾಗಿದೆ. ಮತ್ಸ್ಯ ಯಂತ್ರವನ್ನು ಭೇದಿಸಿದವರಿಗೆ ದ್ರೌಪದಿಯು ಸಿಕ್ಕುವಳೆಂದು ನಿಯಮ ವಿತ್ತು. ಅರ್ಜುನನು ಅದರಲ್ಲಿ ಜಯಶಾಲಿಯಾಗಿ ತನ್ನ ಅಣ್ಣ ತಮ್ಮಂದಿರೊಡನೆ ದ್ರೌಪದಿಯನ್ನೂ ಕರೆದುಕೊಂಡು ಮನೆಗೆ ಬಂದು "ಒಂದು ಹಣ್ಣು ತಂದಿದ್ದೇ"ನೆಂದು ತಾಯಿಗೆ ಹೇಳಿದನು. ಅದು ಆಕೆಗೆ ಹಣ್ಣೆಂದು ಕೇಳಿಸಿತಂತೆ. ಏಕೆಂದರೆ ಆಗ ಅವರು ಬಹಳ ಬಡ ತನದಲ್ಲಿದ್ದುದರಿಂದ ಹೊಟ್ಟೆಯ ಕನವರಿಕೆಯೇ ಹೆಚ್ಚಾಗಿರಬಹುದು. ಆಗ ಆಕೆಯು 'ಅದನ್ನು ಎಲ್ಲರೂ ಹಂಚಿಕೊಂಡು ಭೋಗಿಸಿರಿ' ಎಂದು ಹೇಳಿದಳು. ಹಣ್ಣು ತಂದಿದ್ದರೆ ಹಾಗೆ ಮಾಡುವದು ಯೋಗ್ಯವೇ ಆಗಿತ್ತು. ಆದರೆ ಹೆಣ್ಣನ್ನು ಹಾಗೆ ಮಾಡುವದು ಹೇಗೆ? ಇದು ಲೋಕಸಮ್ಮತವಾದರೂ ಆಗಲಿ; ಲೋಕವಿರುದ್ಧವಾದರೂ ಆಗಲಿ; ಭಗವತ್ಸ್ವರೂಪಳಾದ ತಾಯ ಬಾಯಿಂದ ಹೊರಟ ಮಾತು ಹುಸಿ ಯಾಗಬಾರದೆಂದು ನಿರ್ಣಯಿಸಿ ಆ ಐವರು ಅಣ್ಣತಮ್ಮಂದಿರೂ ಆಕೆಗೆ ವರ್ಷಕ್ಕೊಬ್ಬೊಬ್ಬರಂತೆ ಪತಿಯಾಗಿರಬೇಕೆಂದು ತಮ್ಮಲ್ಲಿ ತಾವೇ ಗೊತ್ತುಮಾಡಿಕೊಂಡು ಅದನ್ನು ಆಚರಣೆಯಲ್ಲಿ ತಂದೇಬಿಟ್ಟರು. ಭಗ ವತ್ಸ್ವರೂಪಳಾದ ಆ ತಾಯ ಮಾತಿನ ಮುಂದೆ ಉಳಿದ ಜಗತ್ತೆಲ್ಲವೂ ಅವರಿಗೆ ಹುಲ್ಲುಕಡ್ಡಿಯಂತೆ ಕಂಡಿತು.

ತಮಗಾಗಿ ಎಷ್ಟೋ ಕಷ್ಟನಿಷ್ಠುರಗಳನ್ನು ಸಹಿಸಿದ ತಾಯಿಯು ತಮಗೆ ಲಾಭಕರವಾಗಿ ಹೇಳಿದ ಮಾತನ್ನು ಪಾಂಡವರು ವೇದವಾಕ್ಯ ದಂತೆ ಗೌರವಿಸಿದ್ದು ಅಷ್ಟೇನೂ ಹೆಚ್ಚಿನದಲ್ಲವೆಂಬಂತೆ ಕರ್ಣನು ಮಾತೃಭಕ್ತಿಯೆಂಬ ಅರಮನೆಗೆ ಕಲಶವನ್ನಿಟ್ಟಿದ್ದಾನೆ. ಪಾಂಡವರಂತೆ ಕರ್ಣನೂ ಕುಂತಿಯ ಮಗನು. ಆದರೆ ಅವನು ಆಕೆಯ ಕನ್ಯಾವಸ್ಥೆ ಯಲ್ಲಿ ಸ್ನಾನಾರ್ಥವಾಗಿ ನದಿಗೆ ಬಂದಿದ್ದಾಗ ಸೂರ್ಯನ ಮಂತ್ರದ ಪುರಶ್ಚರಣೆಯ ಪ್ರಭಾವದಿಂದ ಹುಟ್ಟಿದವನು. ಅವನು ಯಾವಾಗ ಎಲ್ಲಿ ಹೇಗಾದರೂ ಹುಟ್ಟಲಿ. ಮಗನ ಯೋಗಕ್ಷೇಮವನ್ನು ನೋಡಿ

ಕೊಳ್ಳುವದು ತಾಯಿ ಕರ್ತವ್ಯವು. ಕರ್ಣನ ವಿಷಯದಲ್ಲಿ ಕುಂತಿಯು ಈ ನಿಯಮವನ್ನು ಮೀರಿ ನಡೆದಿರುವ ಅಪರಾಧವು ಅತ್ಯಂತದುಸ್ಸಹ ವಾಗಿದೆ. ಕನ್ಯೆಯಾದ ತಾನು ಮಗುವನ್ನು ಎತ್ತಿಕೊಂಡು ಊರೊಳಗೆ ಹೋದರೆ ತನ್ನ ಪಾಡು ನಗೆಗೀಡಾದೀತೆಂಬ ವಿಚಾರವನ್ನು ತಂದುಕೊಂಡಕುಂತಿಗೆ ತಾನು ಮಗುವನ್ನು ಬಯಲಲ್ಲಿ ಬಿಟ್ಟುಹೋದರೆ ಅದರ ಗತಿಯೇನೆಂಬ ವಿಚಾರವು ತಲೆದೋರದಿರುವದು ಆಶ್ಚರ್ಯಕರವಾಗಿದೆ! ಅಂತು ಕುಂತಿಯು ತನ್ನ ಮುದ್ದುಮಗುವನ್ನು ಗಂಗಾನದಿಯು ದಡದಲ್ಲಿ ಬಿಟ್ಟು ತನಗೊಂಡಪವಾದವು ಬರದಿದ್ದರೆ ಸರಿಯೆಂದು ಕಲ್ಲುಮನಸ್ಸಿನಿಂದ ತನ್ನ ಮನೆಯ ದಾರಿಯನ್ನು ಹಿಡಿದಳು. ಈ ತನ್ನ ಪಾಪಕ್ಕೆ ಮುಂದೆ ಕುಂತಿಯೇ ಪಶ್ಚಾತ್ತಾಪಪಟ್ಟು ಇರುವಳು; ಆಗ ವ್ಯಾಸರು ಸಮಾಧಾನವನ್ನು ಹೇಳಿಯೂ ಇರುವರು. ಈಗ ಅದರಿಂದ ಏನು ಪ್ರಯೋಜನ? ಇದು ಪಶ್ಚಾತ್ತಾಪದಿಂದ ತಿದ್ದುವದಕ್ಕೆ ಬರುವಂಥ ಪಾಪವಲ್ಲ.

"ಉತ್ತರೆಯು ಬರೆತರೆ, **ಹೆತ್ತವ್ವ ತೊರೆದರೆ,** ।
ಸತ್ಯರು ತಪ್ಪಿ ನಡೆದರೆ, ಲೋಕವಿ।
ನ್ನೆತ್ತ ಸೇರುವದು? ಸರ್ವಜ್ಞ ॥"

ಆದರೂ ಕರ್ಣನಿಗೆ ದೀರ್ಘಾಯುರ್‍ಯೋಗವಿದ್ದದರಿಂದ ಹೇಗೋ ಅವನು ಒಬ್ಬ ಬೆಸ್ತನ ಕೈಗೆ ಸಿಕ್ಕಿ ಕೌರವನ ಆಸ್ಥಾನಕ್ಕೆ ಸೇರಿ ಕೊನೆಗೆ ಅಂಗದೇಶದ ರಾಜನಾದನು. ಇರಲಿ. ಜಗತ್ತಿನಲ್ಲಿ ಮಕ್ಕಳಲ್ಲಿ ಕೆಟ್ಟವರು ಹುಟ್ಟಬಹುದೇ ಹೊರತು ತಾಯಿಯರಲ್ಲಿ ಕೆಟ್ಟವರಿರುವದಿಲ್ಲವೆಂಬರ್ಥವನ್ನಿಟ್ಟು

"ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ"

ಎಂದು ಹೇಳಿದ **ಶ್ರೀಶಂಕರಾಚಾರ್ಯ**ರಿಗೆ ಆಗ ಕುಂತೀದೇವಿಯು ನೆನಪು ಬಂದಿರಲಾರದು. ಅಂತು ಕುಂತಿಯು ಕರ್ಣನಿಗಾಗಿ ಯಾವ ಕಷ್ಟನಿಷ್ಠುರಗಳನ್ನೂ ಸಹಿಸಿದವಳಾಗಲಿಲ್ಲ. ಇಂಥ ತಾಯಿಯು ಒಮ್ಮೆ ಕರ್ಣನ ಬಳಿಗೆ ಬಂದಿದ್ದಾಳೆ. ಆಗ ಕೌರವ ಪಾಂಡವರ ಯುದ್ಧವು ನಡೆದಿದೆ. ಕರ್ಣನು ಅರ್ಜುನನ ಪ್ರತಿದ್ವಂದ್ವಿಯಾಗಿ ಕೌರವರ ಪಕ್ಷದಲ್ಲಿ ಮಹಾಯೋಧನಾಗಿದ್ದಾನೆ; ಒಂದು ದಿನ

ಅರುಣೋದಯದಲ್ಲಿ ಗಂಗಾತೀರದಲ್ಲಿ ಊರ್ಧ್ವಬಾಹುವಾಗಿ ಪೂರ್ವಾಭಿಮುಖವಾಗಿ ನಿಂತು ಜಪವನ್ನು ಮಾಡುತ್ತಿದ್ದಾನೆ. ಅಪರಾಹ್ಣದ ವರೆಗೂ ಕುಂತಿಯು ಅವನ ಸೆರಗಿನ ನೆಳಲಲ್ಲಿ ಸಮಯವನ್ನು ಕಾದುಕೊಂಡಿದ್ದಾಳೆ. ತನ್ನ ಜಪವು ಮುಗಿಯುತ್ತಲೇ ಕರ್ಣನು ತಿರುಗಿ ನೋಡಿದ್ದಾನೆ. ಅದುವರೆಗೆ ತಾನು ಕುಂತಿಯ ಮಗನೆಂದು ಅವನಿಗೆ ಗೊತ್ತಾಗಿದೆ. ಉಳಿದ ತಾಯಿಯರಂತೆ ಕುಂತಿಯು ತನಗೆ ಯಾವ ಹೆಚ್ಚಿನ ಉಪಕಾರವನ್ನು ಮಾಡಿರದಿದ್ದರೂ ತನ್ನ ಜನ್ಮಕ್ಕೆ ಆಕೆಯೇ ಕಾರಣಳಾದ್ದರಿಂದ ಆಕೆಗೆ ನಮಸ್ಕಾರವನ್ನು ಮಾಡಿ ಅವನು ಹೇಳಿರುವದೇನೆಂದರೆ—

"ಪಡೆದತಾಯುಂ ತಂದೆಯು।
ಮೊಡಲಂ ಪ್ರಾಣಮುಮನವರವವು; ಕೇಳಿದುದಂ॥
ಕುಡುವುದರಿದಾಯ್ತೆ? ನೀಮೆನ।
ಗೆಡೆಮಡಗದೆ ಬೆಸಸ ತೊಳ್ತುವೆಸನಂ ಬೆಸಸಿಂ॥

—ಪಂಪಭಾರತ.

"ಹೆ, ತಾಯಿಯೆ, ಶರೀರವೂ ಪ್ರಾಣವೂ ಎರಡೂ ತಂದೆತಾಯಿಗಳಿಂದ ಆದವುಗಳು. ಆದ್ದರಿಂದ ಅವು ತಂದೆತಾಯಿಗಳ ಸ್ವತ್ತುಗಳು. ಆದಕಾರಣ ನೀನು ಸಂಕೋಚಪಡದೆ ನಿನ್ನ ಸೇವೆಯನ್ನು ಆಜ್ಞಾಪಿಸು"– ಹೀಗೆಂದು ಹೇಳಿದಾಗ ಕುಂತಿಯ ಬಾಯಿಂದ ಬಂದ ಮಾತೇನು? ಪಾಂಡವರಿಗೆ ಹಣ್ಣನ್ನು ಹಂಚಿಕೊಂಡು ತಿನ್ನಿರೆಂದಂತೆ ಕರ್ಣನಿಗೆ ಲಾಭವನ್ನು ತೋರಿಸುವ ಮಾತೇನೂ ಇಲ್ಲ. ಯಾವ ಕೌರವನ ಆಶ್ರಯದಲ್ಲಿ ಅವನು ಇದುವರೆಗೂ ಬೆಳೆದಿರುವನೊ ಆ ಕೌರವನ ಪಕ್ಷವನ್ನು ಬಿಟ್ಟು ತನ್ನ ಉಳಿದ ಧರ್ಮರಾಯ ಮೊದಲಾದವರ ಗುಂಪಿಗೆ ಸೇರಬೇಕೆಂಬ ಸ್ವಾರ್ಥಬುದ್ಧಿಯ ಆವೇಶದ ಬಯಕೆಯನ್ನು ಆಕೆ ಅವನ ಮುಂದಿಟ್ಟಳು. ಕೌರವನ ಪಕ್ಷವನ್ನು ಬಿಡುವದಂತು ಅವನಿಗೆ ಧರ್ಮವಿರುದ್ಧವೆನಿಸಿತು. ಆದರೂ–ತನ್ನನ್ನು ಆಕೆ ಎಷ್ಟೇ ಅನಾದರ ಮಾಡಿದ್ದರೂ– ಆಕೆಯ ಮಾತಿಗೆ ಗೌರವವನ್ನು ಕೊಡಬೇಕೆಂದು ನಿಶ್ಚಯಿಸಿ ಕರ್ಣನು ತಾನು ಅರ್ಜುನನೊಬ್ಬನನ್ನು

ಹೊರತು ಉಳಿದ ನಾಲ್ವರಲ್ಲಿ– ಸೆರೆಸಿಕ್ಕಿದರೂ ಕೂಡ– ಯಾರನ್ನೂ ಕೊಲ್ಲುವದಿಲ್ಲವೆಂದು ಮಾತು ಕೊಟ್ಟು ಕಳುಹಿಸಿದನು. ಪಾಂಡವರನ್ನು ನಿರ್ಮೂಲ ಮಾಡುವದಕ್ಕೇ ದೀಕ್ಷೆಯನ್ನು ತೊಟ್ಟಿದ್ದಂಥ ಕರ್ಣನು ನಾಮಮಾತ್ರಳಾದ ತನ್ನ ತಾಯಿಗಾಗಿ ತನ್ನ ಪ್ರತಿಜ್ಞೆಯ ವೇಗವನ್ನೆಲ್ಲ ಇಳಿಸಿ ಮಾತೃಭಕ್ತಿಯಲ್ಲಿ ಹೆಸರುಗೊಂಡದ್ದು ಅತ್ಯಂತ ಪ್ರಶಂಸನೀಯವಾಗಿದೆ.

ತಾಯ ಹೆಚ್ಚುಗಾರಿಕೆಯು ಇಷ್ಟು ವಿಶೇಷವಾಗಿರುವದರಿಂದ ಯಾರೂ ತಾಯನ್ನು ಅನಾದರ ಮಾಡಬಾರದು. ತಾಯ ಸೇವೆಯನ್ನು ಅತ್ಯುತ್ಸಾಹದಿಂದ ನಡೆಸಬೇಕು. ತನ್ನ ಸ್ವಾರ್ಥವನ್ನು ಒಂದು ಮೂಲೆಯಲ್ಲಿ ಮುದುರಿಟ್ಟು ತಾಯೇ ತನ್ನ ಸರ್ವಸ್ವವೆಂದೂ ತಾಯೇ ಪ್ರತ್ಯಕ್ಷ ಭಗವತ್ಸ್ವರೂಪವೆಂದೂ ತಿಳಿದು ತಾಯ ಆಶೀರ್ವಾದವು ತನ್ನ ಮೇಲೆ ಯಾವಾಗಲೂ ಇರುವಂತೆ ನಡೆದುಕೊಳ್ಳಬೇಕು.

ಮನುಜನೆನಿಪಾತ ತಾಯಿಯ ।
ನೆಣಿಕೆಗೆ ಕೈಗೊಳದೆ ಬಾಳ್ವನಾದೊಡೆ ಧರೆಯೊಳ್ ॥
ದನುಜರೆನಿಪಾತತಾಯಿಯ ।
ರೆಣಿಕೆಗೆ ಪಕ್ಕಾಗಿ ಬಾಳ್ವನಪ್ಪಂ ದರಿಯೊಳ್ ॥



# ತಂದೆಯ ಹಿರಿಯತನ.

ತಾಯು ಹೆಚ್ಚುಗಾರಿಕೆಯನ್ನು ಮನಗಂಡ ಮೇಲೆ ಆಕೆಯ ಸರ್ವಾರ್ಥಚಿಂತಾಮಣಿಯಾದ ತಂದೆಯ ಹಿರಿಯತನವು ತಾನಾಗಿ ಮುಂದೆ ಬಂದು ನಿಲ್ಲುವದು. ತಾಯನ್ನು ಅನುವರ್ತಿಸಿ ನಡೆಯು ವದು ತನ್ನ ಮುಖ್ಯ ಕರ್ತವ್ಯವೆಂದು ತಿಳಿಯುವ ಮನುಷ್ಯನು ಆಕೆಗೆ ಪತಿಯೂ ಪರದೈವವೂ ಆದ ತನ್ನ ತಂದೆಯ ಅನುಚರನಾಗಿರಬೇಕೆಂ ಬುದನ್ನು ಹೇಗೆ ತಿಳಿಯದೆ ಇದ್ದಾನು? ತಾಯಿಂದ ಆಗಿರುವ ನಮ್ಮ ಉತ್ಪತ್ತಿಯೂ ರಕ್ಷಣೆಯೂ ಎಲ್ಲವೂ ತಂದೆಯ ಬೆಂಬಲದಿಂದಲೇ ಆಗಿರುವದನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ನಮಗೆ ತಂದೆಯ ಹಿರಿಯ ತನವು ಮತ್ತಷ್ಟು ಹೆಚ್ಚಿನದಾಗಿ ಕಾಣುವದು.

ಸ್ತ್ರೀಯು ಗರ್ಭಿಣಿಯಾಗುತ್ತಲೇ ಪುರುಷನು ಆ ಗರ್ಭದ ಬೆಳ ವಣಿಗೆಗೆ ಅನುಗುಣವಾದ ಸರ್ವಸಹಾಯಸಂಪತ್ತನ್ನೂ ಆ ಸ್ತ್ರೀಗೆ ಒದಗಿಸುವನು. ಇಷ್ಟೇ ಅಲ್ಲ. ಆ ಗರ್ಭದಿಂದ ಹುಟ್ಟುವ ಶಿಶು ತನ್ನ ವಂಶದ ಹೆಸರುವಾಸಿಯನ್ನುಳಿಸುವದೆಂಬ ಅಭಿಮಾನವನ್ನು ತಾಳಿ ಅವನು ಆ ಸ್ತ್ರೀಯ ಮೇಲೆ ಪೂರ್ವಾಧಿಕವಾದ ಆದರವನ್ನೇ ತೋರಿಸು ವನು; ಆ ಸ್ತ್ರೀಯ ಹೆರಿಗೆ, ಬಾಣಂತಿತನ—ಮೊದಲಾದ ಸಂಭರ್ಗಗಳಲ್ಲೆಲ್ಲ ಆ ಸ್ತ್ರೀಗೆ ಯಾವ ಬಗೆಯ ಉಪಹತಿಯೂ ಒದಗದಂತೆ ತನ್ನ ಮನುಷ್ಯ ಪ್ರಯತ್ನವನ್ನೆಲ್ಲ ಉಪಯೋಗಿಸಿ ಸರ್ವಸೌಕರ್ಯಗಳನ್ನೂ ಕಲ್ಪಿಸು ವನು. ಶಿಶುವಿನ ಶರೀರರಚನೆಗೆ ತಾಯಿ ಹೇಗೋ ಹಾಗೆ ತಂದೆಯೂ ಪಾಲುದಾರನಾದ್ದರಿಂದ ಸ್ವಭಾವವಾಗಿಯೇ ತಾಯಿಯಂತೆಯೇ ತಂದೆಯೂ ಅದನ್ನು ಪ್ರೀತಿಸುತ್ತಾನೆ. ಶಿಶುವಿಗೆ ತಾಯ ಪರಿಚಯ ವಾದ ಮೇಲೆ ಆಗುವ ಹೆಚ್ಚಿನ ಪರಿಚಯವು ತಂದೆಯದೇ ಆಗಿರುವದು. ಆದ್ದರಿಂದಲೇ ತಾಯಿಯನ್ನು ದೇವರಂತೆ ತಿಳಿಯಬೇಕೆಂದು ಹೇಳಿ ದ್ದಾಗುತ್ತಲೇ ಶ್ರುತಿಯು "**ಪಿತೃದೇವೋ ಭವ**" ಎಂಬ ಮಾತಿ ನಿಂದ ತಂದೆಯನ್ನು ದೇವರಂತೆ ತಿಳಿಯಬೇಕೆಂದು ಹೇಳಿರುವದು.

ಶಾಸ್ತ್ರವು ತಾಯಿಗಿಂತ ತಂದೆಗೆ ಹೆಚ್ಚು ಬೆಲೆಯನ್ನು ಕೊಡು ವದು. ಇದಕ್ಕೆ ಕಾರಣವೇನೆಂದರೆ ತಾಯಿಯಿಂದ ವಿಶೇಷವಾಗಿ ಸ್ಥೂಲಶರೀರದ ಪರಿಪುಷ್ಟಿ ಮಾತ್ರ ಸಾಗುವದು. ತಂದೆಯಿಂದ ವಿಶೇಷ ವಾಗಿ ಸೂಕ್ಷ್ಮಶರೀರವಾದ ಮನಸ್ಸಿನ ಉನ್ನತಿಗೆ ಸಹಾಯವು ದೊರೆಯುವದು. ಮನುಷ್ಯನ ನಿಜವಾದ ಬೆಲೆಯು ಮನಸ್ಸಿನ ಉನ್ನ ತಿಯಿಂದಲೇ; ಸ್ಥೂಲಶರೀರದ ಸ್ಥಿತಿಯಿಂದ ಅಲ್ಲ. ಆದ್ದರಿಂದ ತಂದೆಯ ಬೆಲೆ ಹೆಚ್ಚು. ತಾಯಿ ಮೊದಮೊದಲು ಶರೀರವನ್ನು ದೃಢಗೊಳಿಸಿ ದ್ದಾಗುತ್ತಲೇ—ಎಂದರೆ ಬಾಲ್ಯದ ದೆಸೆಯು ಕಳೆಯುತ್ತಲೇ—ತಂದೆಯು ಶಿಶುವಿನ ಮನಸ್ಸನ್ನು ಪರಿಪುಷ್ಟಿಗೊಳಿಸುವದಕ್ಕಾರಂಭಿಸುವನು. ವಿದ್ಯಾಭ್ಯಾಸವೆಂದು ಈಗ ಜನರು ಹೇಳುವದೆಲ್ಲ ಮನಸ್ಸಿನ ಶಿಕ್ಷಣೆ ಯೇ. ಇದು ಎಲ್ಲ ಸಂದರ್ಭದಲ್ಲಿಯೂ ತಂದೆಯಿಂದಲೇ ಸಾಕ್ಷಾ ತ್ತಾಗಿ ನಡೆಯದೆ ಇದ್ದರೂ ಬಹುಮಟ್ಟಿಗೆ ತಂದೆಯ ಮೇಲುವಿಚಾ ರಣೆಯ ಮೂಲಕವೇ ನಡೆಯುವದರಿಂದ ಇದರ ಶ್ಲಾಘನೆಯೆಲ್ಲ ತಂದೆಗೇ ಸಲ್ಲುವದು. ತಂದೆಯ ಮೂಲಕವಾಗಿ ದೊರೆತ ಈ ಶಿಕ್ಷ ಣದ ಪ್ರಭಾವದಿಂದಲೇ ಮನುಷ್ಯನು ಜಗತ್ತಿನಲ್ಲಿ ತನ್ನ ಹೆಸರುವಾಸಿ ಯನ್ನುಂಟುಮಾಡಿಕೊಳ್ಳುವನು.

ಶಿಶು ಗರ್ಭವಾಸಕ್ಕೆ ಬಂದದ್ದು ಮೊದಲುಮಾಡಿಕೊಂಡು ಸ್ವಸಾಮರ್ಥ್ಯದಿಂದ ತನ್ನ ಜೀವನವನ್ನು ಮಾಡುವವರೆಗೂ ತಂದೆಯು ಆ ಶಿಶುವಿನ ರಕ್ಷಣೆಯ ಭಾರವನ್ನು ಹೊತ್ತಿರುವನು. ಅಥವಾ ಸ್ವತಂತ್ರವಾಗಿ ಜೀವನಮಾಡುವವರೆಗೆಂದೇಕೆ? ಮುಂದಕ್ಕೂ ಕೂಡ ಸಾಧನವಾಗಿ ಬೇಕಾದಷ್ಟು ಆಸ್ತಿಯನ್ನು ಮಾಡಿಡುವದಕ್ಕೆ ಹೆಣಗು ತ್ತಿರುವದು ಎಲ್ಲರಿಗೂ ಕಂಡ ಮಾತೇ ಆಗಿದೆ. ಇರಲಿ. ಬರೀ ಹೊಟ್ಟೆ ಬಟ್ಟೆಯ ಭಾರವಿಷ್ಟೇ ಅಲ್ಲ. ಅದರ ಭಾರವೇನೂ ಹೆಚ್ಚಲ್ಲ. ಮನ ಸ್ಸನ್ನು ಉನ್ನತಿಗೊಳಿಸುವ ಶಿಕ್ಷಣದ ವೆಚ್ಚಕ್ಕಾಗಿ ತಂದೆಯು ಬೇಕಾ ದಷ್ಟು ದುಡಿದು ಕೊಡುವನು. ಹೀಗೆ ನಿಜವಾದ ಮನುಷ್ಯತ್ವಕ್ಕೆ ತಂದೆಯೇ ಮುಖ್ಯಕಾರಣನಾಗುವದರಿಂದ ಶಾಸ್ತ್ರಕಾರರಿಂದ ಅವನಿಗೆ ಹೆಚ್ಚಿನ ಪೂಜ್ಯತೆ ದೊರೆತಿರುವದು. ಕೊನೆಗೆ ಶಾಸ್ತ್ರದ ತನಕ ಹೋಗ

ಬೇಕಾದ್ದೂ—ಇಲ್ಲ. ರೂಢಿಯಲ್ಲಿ ಪಿತೃ ಎಂಬ ಮಾತಿಗೆ ತಂದೆಯೆಂದ ರ್ಥವಷ್ಟೆ. ತಾಯಿಯೆಂಬರ್ಥವೂ ಅದರೊಳಗೆ ಅಂತರ್ಭಾವವಾಗಿ ರುವದು. ಹೀಗೆ ತಾಯಿಯೂ ತಂದೆಯೆಂಬರ್ಥವನ್ನು ಹೇಳುವದಕ್ಕೆ ಹೊರಟ ಮಾತಿನ ಮರೆಯಲ್ಲಿರಬೇಕಾಗಿರುವದಿಷ್ಟೇ ಅಲ್ಲ. ತಂದೆಯೂ ಬದುಕಿದ್ದರೆ ಮಾತ್ರ ಮನುಷ್ಯನು ಜೀವತ್ಪಿತೃಕನೆನಿಸಿಕೊಳ್ಳುವನೇ ಹೊರತು ಒರೀ ತಾಯಿ ಬದುಕಿರುವ ಮಾತ್ರದಿಂದ ಅವನು ಜೀವ ತ್ಪಿತೃಕನೆನಿಸಿಕೊಳ್ಳಲಾರನು. ಜೀವತ್ಪಿತೃಕನೆಂದರೆ ಹಿರಿಯರನ್ನುಳ್ಳವ ನೆಂದರ್ಥ. ಮನಸ್ಸಿನ ಪ್ರಗತಿಯನ್ನು ಮಾಡಿಕೊಡುವದೇ ಹಿರಿಯ ತನವಾದ್ದರಿಂದ ಮನುಷ್ಯನಿಗೆ ತಂದೆಯ ಹಿರಿಯತನವು ಹೆಚ್ಚು ಬೆಲೆ ಯುಳ್ಳದ್ದಾಗಿರುವದು. ಆಕಾಶಕ್ಕಿಂತ ದೊಡ್ಡ ವಸ್ತು ಯಾವದೆಂದು ಯಕ್ಷನು ಕೇಳಿದಾಗ ಧರ್ಮರಾಯನು ತಂದೆಯೆಂದು ಉತ್ತರವನ್ನು ಕೊಟ್ಟಿದ್ದಾನೆ.

ತಾಯಿಮಕ್ಕಳ ಪ್ರೇಮವು ಲೋಕದಲ್ಲಿ ಎಷ್ಟೇ ಹೆಸರುಗೊಂಡಿ ದ್ದರೂ ತಂದೆಮಕ್ಕಳ ಪ್ರೇಮವೂ ಅಷ್ಟೇ ಸ್ಫುಟವಾಗಿರುವದು. ಹಿಂದೆ ಪುರೂರವನೆಂಬ ರಾಜನು ಊರ್ವಶಿಯೆಂಬ ಅಪ್ಸರಸ್ತ್ರೀಯಲ್ಲಿ ಅನುರಕ್ತನಾಗಿದ್ದನು. ಕೆಲವು ಕಾಲದ ಮೇಲೆ ಆಕೆಯು ಅವನನ್ನು ಅಗಲಿ ಚ್ಯವನಋಷಿಗಳ ಆಶ್ರಮಕ್ಕೆ ಹೋಗಿ ಅಲ್ಲಿ ಆಯುವೆಂಬ ಮಗ ನನ್ನು ಹಡೆದಳು. ಆಮೇಲೆ ಒಂದಾನೊಂದು ದಿನ ಪುರೂರವನು ಕಾರಣಾಂತರಗಳಿಂದ ಆ ಆಶ್ರಮಕ್ಕೆ ಹೋದಾಗ ಆ ಆಯುವು ತನ್ನ ಮಗನೆಂದು ತಿಳಿಯಿತು. ಪುರೂರವನು ಅದುವರೆಗೆ ಆಯುವನ್ನು ಎತ್ತಿದ್ದೂ ಇಳಿಸಿದ್ದೂ ಯಾವದೂ ಇಲ್ಲದಿದ್ದರೂ ತಾವಿಬ್ಬರೂ ತಂದೆ ಮಕ್ಕಳೆಂದರಿಯುತ್ತಲೇ ಅವರಿಬ್ಬರ ಹೃದಯವೂ ಕರಗಿ ನೀರಾಗಿದೆ! ಆಗ ರಾಜನು ಹೇಳುತ್ತಾನೆ:—

**ತಂದೆಯಿವನೆನಗಿವಂಗಾಂ ।**
**ನಂದನನೆಂದರಿಯಲಿನಿತೆನಿಪ್ಪೊಡೆ ನೇಹಂ ॥**
**ತಂದೆಗಳಂಕದೆ ವೃದ್ಧಿಯ ।**
**ನೊಂದಿದ ಸುತಗೆನಿತು ನೇಹಮೋ ತಂದೆಗಳೊಳ್! ॥**

**—ವಿಕ್ರಮೋರ್ವಶೀಯ**

ಹೀಗೆ ತಂದೆಮಕ್ಕಳ ಪ್ರೇಮವು ಹೊಸದಾಗಿ ಹುಟ್ಟಿಬೆಳೆದದ್ದಾಗಿರದೆ ಸ್ವಭಾವವಾಗಿಯೇ ಮನಸ್ಸಿನಲ್ಲಿ ಮನೆಯನ್ನು ಮಾಡಿಕೊಂಡಿರುವಂಥದ್ದಾಗಿರುವದು. ತಂದೆಮಕ್ಕಳು ಚಿಕ್ಕಂದಿನಿಂದ ಕೂಡಿಕೊಂಡಿದ್ದರೆ ಅವರ ಪ್ರೇಮವು ಆಗಲೇ ಸಮೃದ್ಧಿಯಾಗಿ ಬೆಳೆದುಕೊಳ್ಳುವದು. ಹಾಗಿಲ್ಲದೆ ಇದ್ದರೂ ಆ ಪ್ರೇಮವು ಮನಸ್ಸಿನೊಳಗೇ ತನ್ನ ಕಲಕಲವನ್ನೆಬ್ಬಿಸುವದು. ಶ್ರೀರಾಮಚಂದ್ರನು ಲವಕುಶರ ಮೇಲೆ ಯುದ್ಧಕ್ಕೆ ಬಂದನಷ್ಟೆ. ಲವಕುಶರು ತನ್ನ ಮಕ್ಕಳೆಂದು ಶ್ರೀರಾಮನಿಗೆ ತಿಳಿದಿರಲಿಲ್ಲವಾದರೂ ಅವರನ್ನು ಕಂಡ ಕೂಡಲೆ ಅವರಲ್ಲಿ ಶತ್ರುಬುದ್ಧಿಯು ಕಾಣಿಸಿಕೊಳ್ಳದೆ ಹೃದಯವು ಅರಳಿ ಪ್ರೇಮಪ್ರವಾಹವೇ ಹೊರಹೊಮ್ಮಿರುವ ಸಂದರ್ಭವು ರಾಮಾಯಣದಲ್ಲಿ ವರ್ಣಿತವಾಗಿರುವದು.

ತಾಯಿಗಿಂತ ತಂದೆಯ ಹಿರಿಯತನವು ದೊಡ್ಡದೆಂದು ಹೇಳಿದ ಮಾತಿನ ಅರ್ಥವನ್ನು ಉದಾಹರಣೆಯಿಂದ ಕೂಡ ಸ್ಪಷ್ಟಮಾಡಬಹುದು. ದಶರಥನು ಕೈಕೆಯಿಯ ಮಾತಿಗೆ ಸಿಕ್ಕಿದ್ದನ್ನು ನೋಡಿ ಶ್ರೀರಾಮಮೂರ್ತಿಯು ತನ್ನ ತಂದೆಯನ್ನು ಸತ್ಯಸಂಧನನ್ನಾಗಿ ಮಾಡುವದಕ್ಕೆ ತಾನು ವನವಾಸಕ್ಕೆ ಹೋಗಿಬಿಟ್ಟನಷ್ಟೆ. ಸಾಮ್ರಾಜ್ಯ ಪಟ್ಟಾಭಿಷೇಕಕ್ಕೆ ಸಿದ್ಧನಾಗಿದ್ದ ಕೋಮಲನಾದ ತನ್ನ ಮಗನು ತನ್ನ ದೆಸೆಯಿಂದ ಬಹು ಕಷ್ಟಸಾಧ್ಯವಾದ ವನವಾಸಕ್ಕೆ ಹೋದನೆಂದು ತಿಳಿಯುತ್ತಲೇ ದಶರಥನು ಅದೇ ಕೊರಗಿನಿಂದ ತನ್ನ ಜೀವನಯಾತ್ರೆಯನ್ನು ಮುಗಿಸಿಯೇ ಬಿಟ್ಟನು. ಅವನ ಪುತ್ರಪ್ರೇಮವು ಈ ರೀತಿಯಲ್ಲಿ ಪರಿಣಮಿಸಿತು. ಹೊರಗಣವರಿಗೆ ಎಷ್ಟೇ ಮರೆಯಾಗಿದ್ದರೂ ಒಳಗೆ ತಾಯಿಯರಲ್ಲಿ ಹೇಗೋ ಹಾಗೆ ತಂದೆಗಳಲ್ಲಿ ಪುತ್ರಪ್ರೇಮವು ಪರಿಪೂರ್ಣವಾಗಿ ಇದ್ದೇ ಇರುವದು.

ಆದ್ದರಿಂದ ಮನುಷ್ಯನು ತನ್ನ ಸರ್ವಸಾಹಸದಿಂದಲೂ ತಾಯಿ ಅನುಗ್ರಹದಲ್ಲಿ ಕೊಂಕುಬರಗೊಡದಂತೆ ತಂದೆಯ ಆಶೀರ್ವಾದವನ್ನು ಹೆಚ್ಚು ಮಹತ್ವದ್ದೆಂದು ಭಾವಿಸಬೇಕು. ಒಂದೊಂದು ಸಂದರ್ಭದಲ್ಲಿ ತಂದೆಗಿಂತಲೂ ಮಗನು ಹೆಚ್ಚು ಬುದ್ಧಿವಂತನೂ ಐಶ್ವರ್ಯವಂತನೂ

ಕೀರ್ತಿವಂತನೂ ಆಗಬಹುದು. ಆದರೂ ತಂದೆಯನ್ನು ಕಡೆಗಾಣುವ ಪಾಪಬುದ್ಧಿಯನ್ನುಮಾತ್ರ ಎಂದೂ ಮಾಡಬಾರದು. ತನಗೆ ಬಂದಿರುವ ಹೆಚ್ಚುಗಾರಿಕೆಗೆಲ್ಲ ಒಂದು ಪಕ್ಷ ತನ್ನ ಸ್ವಸಾಮರ್ಥ್ಯವೇ ಕಾರಣವಾಗಿದ್ದರೂ ಅದು ತನ್ನ ಹಿರಿಯರ ಆಶೀರ್ವಾದಬಲದಿಂದ ಫಲಕಾರಿಯಾಗಿರುವದೆಂದು ಭಾವಿಸುವದು ಹೆಚ್ಚು ಶ್ರೇಯಸ್ಕರವಾಗಿರುವದು. ತಂದೆಗಳಾದವರು ನಿಜವಾಗಿಯೂ ಮನಸ್ಸಿನಲ್ಲಿ ಮಕ್ಕಳ ಅಭ್ಯುದಯದ ಹಂಬಲಿಕೆಗಳನ್ನೇ ತುಂಬಿಕೊಂಡು ತೊಳಲುತ್ತಿರುವರು. ಅವರು ಆ ತೊಳಲಿಕೆಯ ಸ್ಥಿತಿಯಲ್ಲಿ ಮನಸ್ಸಿನಲ್ಲಿಯೇ ದೇವರಿಗೆ ಒಗೆಬಗೆಯ ಹರಕೆಗಳನ್ನು ಹೊತ್ತಿದ್ದರಿಂದಲೇ ಮಕ್ಕಳ ಏಳಿಗೆಯು ಕಣ್ಣಿಗೆ ಕಾಣುವಂತೆ ಆಗುವದು. ಇಂಥ ಸಂದರ್ಭದಲ್ಲಿ ನೀತಿಶಾಸ್ತ್ರಕಾರರು ಹೇಳುವದೇನೆಂದರೆ—

"ಪ್ರಾಪ್ಯಾಪಿ ಮಹತೀಂ ವೃದ್ಧಿಂ ವರ್ತೇತ ಪಿತುರಾಜ್ಞಯಾ |
ಪುತ್ರಸ್ಯ ಪಿತುರಾಜ್ಞಾ ಹಿ ಪರಮಂ ಭೂಷಣಂ ಸ್ಮೃತಮ್ ||"
—ಶುಕ್ರನೀತಿ

ತಾತ್ಪರ್ಯವೇನೆಂದರೆ— "ತಾನು ಎಷ್ಟೇ ಹೆಚ್ಚುಗಾರಿಕೆಯನ್ನು ಪಡೆದಿದ್ದರೂ ತಂದೆಯ ಆಜ್ಞೆಯನ್ನು ತಲೆಯ ಮೇಲೆ ಹೊತ್ತು ನಡೆಯುತ್ತಿರಬೇಕು. ಮಗನಿಗೆ ತಂದೆಯ ಆಜ್ಞೆಯೇ ದೊಡ್ಡ ಆಭರಣ." ಶ್ರೀರಾಮಚಂದ್ರನು ಜನಕರಾಜನ ಸಭೆಯಲ್ಲಿ ಶಿವಧನುರ್ಭಂಗವನ್ನು ಮಾಡಿ ಸಮಸ್ತರನ್ನೂ ಬೆರಗುಗೊಳಿಸಿ ಸೀತೆಯನ್ನು ಗೆದ್ದಿದ್ದನು. ಆದರೂ ತಂದೆಯಾದ ದಶರಥನು ಸಾಕ್ಷಾತ್ತಾಗಿ ಬಂದು ಆಜ್ಞೆಯನ್ನು ಕೊಟ್ಟ ಹೊರತು ಪಾಣಿಗ್ರಹಣಕ್ಕೆ ಒಪ್ಪಲಿಲ್ಲ.

ಹೀಗೆ ಹಿರಿಯರನ್ನು ನಿತ್ಯದಲ್ಲಿಯೂ ಗೌರವಿಸುವವನಿಗೆ ಆಯು, ಪ್ರಜ್ಞೆ, ಯಶಸ್ಸು, ಬಲ— ಈ ನಾಲ್ಕು ವಿಷಯಗಳೂ ಅಭಿವೃದ್ಧಿಯಾಗುವವೆಂದು **ಬುದ್ಧಗೀತೆಯು** ಸಾರುವದು. ಇದಕ್ಕಿಂತ **ಮಹಮ್ಮದಪೈಗಂಬರನ** ಉಕ್ತಿಯು ಇನ್ನೂ ಮಹತ್ತರವಾಗಿರುವದು. ಅದೇನೆಂದರೆ—"ತಾಯಿತಂದೆಗಳು ತನ್ನ ಅಹಿತವನ್ನು ಮಾಡುತ್ತಿದ್ದರೂ ಅವರ ಸೇವೆಯಲ್ಲಿರುವದೇ ಮಗನ ಕರ್ತವ್ಯ."

ಈ ವಾಕ್ಯಗಳೆಲ್ಲ ತಂದೆಯ ಹಿರಿಯತನವನ್ನು ಹೆಚ್ಚು ಉದ್ಭೋಧಗೊಳಿಸುವವು.

ಮನುಷ್ಯನಿಗೆ ತಂದೆತಾಯಿಗಳಿಬ್ಬರೂ ಭಗವತ್ಸ್ವರೂಪರಾದ್ದರಿಂದ ಅವರ ಸೇವೆಯು ಸರ್ವದೇವತಾಸೇವೆಗೆ ಸಮಾನವಾಗಿರುವದು. ತಂದೆತಾಯಿಗಳನ್ನುಪೇಕ್ಷೆ ಮಾಡಿ ನಡೆಸುವ ಯಾವ ಧರ್ಮಾಚರಣೆಗೂ ಫಲವಿಲ್ಲದೆ ಹೋಗುವದು. ಈ ಸಂದರ್ಭದಲ್ಲಿ ಪಂಢರಾಪುರದಲ್ಲಿದ್ದ ಪುಂಡರೀಕನೆಂಬ ಬ್ರಾಹ್ಮಣನು ಒಳ್ಳೆಯ ಉದಾಹರಣೆಯಾಗಿರುವನು. ಪುಂಡರೀಕನು ಕಾಶೀವಾಸದ ಮಹಿಮೆಯ ಪುರಾಣದ ಮಾತಿಗೆ ಮರುಳಾಗಿ ಮುದುಕರಾಗಿದ್ದ ತನ್ನ ತಂದೆತಾಯಿಗಳ ಯೋಗಕ್ಷೇಮವನ್ನು ಉಪೇಕ್ಷೆಮಾಡಿ ಹೆಂಡತಿಯನ್ನು ಮಾತ್ರ ಜೊತೆಗೆ ಕಟ್ಟಿಕೊಂಡು ಕಾಶಿಯ ದಾರಿಯನ್ನು ಹಿಡಿದನು. ಎಷ್ಟೋ ದಿನದ ಪ್ರಯಾಣವು ನಡೆಯಿತು. ಆಮೇಲೆ ಅವನ ಮಾರ್ಗದಲ್ಲಿ ಕುಕ್ಕುಟಮಹರ್ಷಿಗಳೆಂಬವರದೊಂದಾಶ್ರಮವಿತ್ತು. ಮಾರ್ಗಾಯಾಸದಿಂದ ಬಳಲಿದ ಪುಂಡರೀಕನು ಆ ಮಹರ್ಷಿಗಳ ಬಳಿಗೆ ಹೋಗಿ ಕಾಶಿ ಇನ್ನೆಷ್ಟುದೂರವಿರುವದೆಂದು ಕೇಳಿದನು. ಆಗ ಆ ಮಹರ್ಷಿಗಳು—"ಎಲೈ ಪ್ರವಾಸಿಯೇ, ನೀನು ಕಾಶಿಯನ್ನು ಬಿಟ್ಟು ಎಷ್ಟೋ ದೂರ ಬಂದು ಕಾಶಿಯ ದೂರವನ್ನು ಕೇಳುತ್ತಿರುವೆಯಲ್ಲ! ನಾನೂ ನಿನ್ನ ಹಾಗೆಯೇ ಕೆಲವು ಕಾಲ ತೊಳಲಿ ಆಮೇಲೆ ನಿಜವಾದ ಕಾಶಿಯನ್ನು ಕಂಡುಕೊಂಡೆನು. ಇಗೊ ಈ ಭಗವತ್ಸ್ವರೂಪರಾದ ನನ್ನ ತಂದೆತಾಯಿಗಳೇ ನನ್ನ ಕಾಶಿ. ಯಾರಿಗೆ ಇಂಥ ಸುಯೋಗವಿಲ್ಲವೊ ಅವರು ಆ ದೂರದ ಕಾಶಿಗೆ ಹೋಗಬೇಕು." ಎಂದು ಅವನ ಅಜ್ಞಾತಿಯನ್ನು ಹೋಗಲಾಡಿಸಿದರು.

ತಂದೆತಾಯಿಗಳನ್ನು ಉಪೇಕ್ಷೆಮಾಡಿದರೆ ಪಶ್ಚಾತ್ತಾಪವೇ ಫಲವೆಂಬದಕ್ಕೆ ಕೌಶಿಕನೆಂಬ ಬ್ರಾಹ್ಮಣನೂ ನಿದರ್ಶನನಾಗಿದ್ದಾನೆ. ಕೌಶಿಕನು ಉಗ್ರವಾದ ತಪಶ್ಚರ್ಯೆಯಿಂದ ಬೇಕಾದ ಸಾಮರ್ಥ್ಯವನ್ನು ಪಡೆಯುವೆನೆಂಬ ಹೆಮ್ಮೆಯಿಂದ ತಂದೆತಾಯಿಗಳನ್ನು ಅನಾದರಿಸಿ ಕಾಡಿಗೆ ಹೋಗಿ ಒಂದು ಮರದ ಕೆಳಗೆ ಒಂಟಿಕಾಲಿನಲ್ಲಿ ನಿಂತು

ತನ್ನ ಸರ್ವಸಾಹಸದಿಂದ ತಪಸ್ಸುಮಾಡುತ್ತಿದ್ದನು. ಹೀಗಿರುವಾಗ ಒಂದು ದಿನ ಮರದ ಮೇಲಿದ್ದ ಹಕ್ಕಿಯು ಅವನ ತಲೆಯ ಮೇಲೆ ಮಲವ ಸ್ನಿಟ್ಟಿತು. ಇದರಿಂದ ಕೋಪಗೊಂಡ ಅವನು ತಲೆಯನ್ನೆತ್ತಿ ಹಕ್ಕಿಯನ್ನು ದುರುದುರು ನೋಡುತ್ತಲೇ ಆ ಕೆಂಗಣ್ಣಿನುರುಬೆಗೆ ಆ ಹಕ್ಕಿ ಬೆಂದು ಬಿತ್ತು. ಇದರಿಂದ ತನ್ನ ತಪಸ್ಸು ವೆಚ್ಚವಾಯಿತೆಂಬ ಎಚ್ಚರ ವಿಲ್ಲದೆ ಅವನು ತನ್ನ ಯೋಗ್ಯತೆಯಾಗಲೆ ಅಟ್ಟಕ್ಕೇರಿರುವದೆಂದು ಉಬ್ಬಿ ದನು. ಇದಾದ ಮೇಲೊಂದು ದಿನ ಅವನು ಭಿಕ್ಷೆಗಾಗಿ ಹತ್ತಿರದ ಒಂದು ಹಳ್ಳಿಗೆ ಹೋಗಿ ಒಂದು ಮನೆಯನ್ನು ಹೊಕ್ಕು "ಭಿಕ್ಷಾಂ ದೇಹಿ" ಎಂದು ನಿಂತಾಗ "ಸ್ವಲ್ಪ ತಡೆಯಿರಿ" ಎಂದು ಒಳಗಣಿಂದ ಮೊದಲು ಶಬ್ದವು ಬಂತು. ಆಮೇಲೆ ಯಜಮಾನಿಯು ಭಿಕ್ಷೆ ಯನ್ನು ತಂದಳು. ಕೌಶಿಕನು ತನ್ನ ಸೊಕ್ಕಿನಿಂದ ಆಕೆಯನ್ನು ದುರುದುರು ನೋಡಿದನು. ಆಕೆಯು ಭಿಕ್ಷೆಯನ್ನು ನೀಡಿ– "ನಿಮ್ಮ ಕೋಪದಿಂದ ಉರಿದು ಬೀಳುವದಕ್ಕೆ ನಾನೇನು ಹಕ್ಕಿಯಲ್ಲ; ಪತಿಯ ಸೇವೆಯಲ್ಲಿದ್ದವಳು."— ಎಂದಳು. ಈ ಮಾತಿನಿಂದ ಬೆರಗಾದ ಕೌಶಿಕನು— "ನೀನು ಕಣ್ಣಿಂದ ಕಾಣದ ಹಕ್ಕಿಯ ವಿಚಾರವು ನಿನಗೆ ಹೇಗೆ ತಿಳಿಯಿತು?"— ಎಂದು ಆಕೆಯನ್ನು ಕೇಳಿದನು. ಆಗ ಆಕೆಯು—"ನಿನಗಿನ್ನೂ ಧರ್ಮಸೂಕ್ಷ್ಮವು ತಿಳಿಯದು; ನೆರೆಯೂರಿ ನಲ್ಲಿರುವ ಧರ್ಮವ್ಯಾಧನಿಂದ ಅದನ್ನು ತಿಳಿದುಕೊ." — ಎಂದು ಹೇಳಿಕಳುಹಿಸಿದಳು. ಅದರಂತೆ ಕೌಶಿಕನು ಧರ್ಮವ್ಯಾಧನ ಬಳಿಗೆ ಹೋದನು. ಧರ್ಮವ್ಯಾಧನು ಪಶುಗಳನ್ನು ಕೊಂದು ಮಾಂಸ ವನ್ನು ಮಾರುತ್ತ ಅದರಿಂದ ಹೊಟ್ಟೆಯನ್ನು ಹೊರೆಯುತ್ತಿದ್ದನು. ಇಂಥವನಿಗೆ ಧರ್ಮವಿನ್ನೇನು ತಿಳಿದಿರಬಹುದೆಂದು ಕೌಶಿಕನ ಮನಸ್ಸು ಸಂಶಯದಿಂದ ಹೊಯ್ದಾಡುತ್ತಿತ್ತು. ಆದರೆ ಧರ್ಮವ್ಯಾಧನು ಕೌಶಿಕನ ಕುಕಲ್ಪನೆಗಳನ್ನೆಲ್ಲ ಕಳೆದು ತಾನು ತಂದೆತಾಯಿಗಳನ್ನು ಭಗವತ್ಸ್ವರೂಪರೆಂದು ಸೇವೆಮಾಡುವದರಿಂದಲೇ ತನಗೆ ಸಕಲ ಧರ್ಮಜ್ಞಾನವೂ ದೊರೆತಿರುವದೆಂದು ತಿಳಿಯಹೇಳಿದನು. ಆಗ ಕೌಶಿಕನ ತಲೆಯ ಪಿತ್ಥವು ಇಳಿಯಿತು. ಒಡನೆ ಅವನು ತನ್ನ ತಪ

ಶ್ವರ್ಯವನ್ನು ಅಲ್ಲಿಗೇ ಸಾಕುಮಾಡಿ ಹಿಂದಿರುಗಿ ತಂದೆತಾಯಿಗಳ ಸೇವೆಯಲ್ಲಿ ನಿರತನಾದನು. ತಂದೆತಾಯಿಗಳನ್ನು ಭಗವತ್ಸ್ವರೂಪ ರೆಂದು ಭಾವಿಸುವದರಲ್ಲಿ ಇಷ್ಟು ಮಹತ್ತ್ವದ ಫಲವಿರುವದರಿಂದ ಯಾರೂ ಈ ಸುಯೋಗವನ್ನು ಕಳೆದುಕೊಳ್ಳಬಾರದು.

ಸರ್ವವಿಧದಲ್ಲಿಯೂ ತಂದೆಯ ಮನೋಗತವನ್ನು ಅನುಸರಿಸಿ ನಡೆಯುವದೇ ತಂದೆಯ ಸೇವೆ. ಈ ಸೇವೆಯನ್ನು ನಡೆಸುವದರಲ್ಲಿ ಸ್ವಭಾವವಾಗಿ ತನ್ನ ಸ್ವಾರ್ಥಬುದ್ಧಿಯು ಎಷ್ಟೇ ಇದ್ದರೂ ಮುಖ್ಯ ವಾಗಿ ತಂದೆಯ ಇಷ್ಟಾರ್ಥವು ನೆರವೇರುವಂತೆ ಮಾಡುವದು ಅಗತ್ಯವು. ಒಬ್ಬರು ತಂದೆತಾಯಿಗಳು ತಮ್ಮ ನಡುವಿನ ಮಗನಾದ ಶುನಶ್ಶೇಫ ನೆಂಬುವನನ್ನು ಅಂಬರೀಷನೆಂಬ ರಾಜನಿಗೆ ನರಬಲಿಗಾಗಿ ಮಾರಿಬಿ ಟ್ಟರು. ಮಗನನ್ನು ತಂದೆತಾಯಿಗಳೇ ಬಲಿಗೆ ಮಾರುವದೆಂಬುದು ವಿಲ ಕ್ಷಣವಾಗಿ ತೋರಬಹುದು. ಇದರ ವಿಚಾರಕ್ಕೆ ಇದು ಪ್ರಸಂಗವಲ್ಲ. ಇದು ಪಿತೃಸೇವೆಯ ಪ್ರಕರಣ. ತಂದೆತಾಯಿಗಳು ತನ್ನನ್ನು ಮಾರಿ ದ್ದರೂ ಪ್ರಾಣವನ್ನು ಕಳೆದುಕೊಳ್ಳುವದು ಶುನಶ್ಶೇಫನಿಗೆ ಒಪ್ಪಲಿಲ್ಲ. ಆದರೆ ತಂದೆಯ ಉದ್ದೇಶವನ್ನು ಉಪೇಕ್ಷಿಸಮಾಡುವದಕ್ಕೂ ಅವನ ಮನಸ್ಸಿಗೆ ಬರದು. ಈ ಸ್ಥಿತಿಯಲ್ಲಿ ಅವನು ತನ್ನ ಪ್ರಾಣರಕ್ಷ ಣೆಯೂ ಆಗಿ ತನ್ನ ತಂದೆಯ ಸಂಕಲ್ಪವೂ ಸಿದ್ಧಿಯಾಗುವಂತೆ ವಿಶ್ವಾ ಮಿತ್ರರಿಗೆ ಶರಣುಹೋದನು. ಅಂಬರೀಷನ ಯಜ್ಞವು ಸಾಂಗವಾ ದರೆ ಶುನಶ್ಶೇಫನ ತಂದೆಯ ಸಂಕಲ್ಪವು ನೆರವೇರಿದಂತಾಯಿತು. ಏಕೆಂದರೆ ಶುನಶ್ಶೇಫನ ಬಲಿಯಿಂದ ಯಜ್ಞವು ಸಾಂಗವಾಗಬೇಕೆಂದು ತಂದೆಯು ಅವನನ್ನು ಮಾರಿದ್ದನು. ಆಗ ವಿಶ್ವಾಮಿತ್ರರು ತಮ್ಮ ಪ್ರಭಾವದಿಂದ ಅವನಿಗೊಂದು ಮಂತ್ರೋಪದೇಶವನ್ನು ಮಾಡಿ ಅದರ ಪುರಶ್ಚರಣೆಯಿಂದ ಇಂದ್ರನನ್ನು ಮೆಚ್ಚಿಸಿ ಬಲಿಯಿಲ್ಲದೆ ಯಜ್ಞವು ಸಾಂಗವಾಯಿತೆನಿಸಿದರು. ಇದರಿಂದ ಶುನಶ್ಶೇಫನ ಸ್ವಾರ್ಥವೂ ಆಯಿತು; ಪಿತೃಸೇವೆಯೂ ಆಯಿತು. ಶುನಶ್ಶೇಫನು ತಾನು ಪ್ರಾಣ ವನ್ನು ಕಳೆದುಕೊಳ್ಳದಿದ್ದರೂ ತನ್ನ ಪ್ರಯತ್ನವಿಶೇಷದಿಂದ ದೊಡ್ಡ

ವರ ಅನುಗ್ರಹವನ್ನು ಪಡೆದು ಹೇಗೋ ಕಾರ್ಯಸಾಧನೆಯನ್ನು ಮಾಡಿದ್ದರಲ್ಲಿಯೂ ಪಿತೃಸೇವೆಯು ನಡೆದೇ ನಡೆಯಿತು.

ಸ್ವಾರ್ಥವನ್ನು ಸರ್ವವಿಧದಲ್ಲಿಯೂ ತ್ಯಾಗಮಾಡಿದಂಥ ಭೀಷ್ಮನ ಪಿತೃಸೇವೆಯು ಸುವರ್ಣಾಕ್ಷರಗಳಲ್ಲಿ ಮುದ್ರಿಸಿಡತಕ್ಕದ್ದಾಗಿದೆ. ಭೀಷ್ಮನ ತಂದೆಯಾದ ಶಂತನುರಾಜನು ಕಾಡಿಗೆ ಹೋಗಿದ್ದಾಗ ಒಬ್ಬ ಬೇಡರ ದೊರೆಯ ಮಗಳನ್ನು ಕಂಡು ಮೋಹಿಸಿ ಆಕೆಯನ್ನು ಪತ್ನಿಯಾಗಿ ಬೇಡಿದನು. ಆಕೆಯ ಹೊಟ್ಟೆಯಲ್ಲಿ ಹುಟ್ಟಿದವನಿಗೇ ಪಟ್ಟಗಟ್ಟುವದಾದರೆ ಮಾತ್ರ ತಾನು ಮಗಳನ್ನು ಕೊಡುವೆನೆಂದು ಆ ಬೇಡನು ಹೇಳಿದನು. ಅಷ್ಟು ಹೊತ್ತಿಗೆ ಶಂತನುವಿಗೆ ತನ್ನ ರಾಣಿಯಲ್ಲಿ ಭೀಷ್ಮನೆಂಬ ಮಗನು ಹುಟ್ಟಿ ಮಹಾವೀರಾಧಿವೀರನೆಂದು ಹೆಸರುಗೊಂಡಿದ್ದನು. ಆದ್ದರಿಂದ ಶಂತನುರಾಜನು ಬೇಡರ ದೊರೆಯ ಮಾತಿಗೆ ಸಮ್ಮತಿಸುವದಕ್ಕೆ ಹಿಂದುಮುಂದು ನೋಡಬೇಕಾಯಿತು. ಇದರ ಸುಳಿವನ್ನರಿಯುತ್ತಲೇ ಭೀಷ್ಮನು ತಾನೆ ಆ ಬೇಡರ ದೊರೆಯ ಬಳಿಗೆ ಹೋಗಿ ತಾನು ಸಿಂಹಾಸನದ ಅಧಿಕಾರವನ್ನು ಬಯಸುವದಿಲ್ಲವೆಂದೂ ಮುಂದೆ ತನ್ನ ಕಡೆಯಿಂದ ರಾಜ್ಯಾಧಿಕಾರಕ್ಕೆ ಹೋರಾಡಬಹುದಾದ ಸಂತತಿಯುಂಟಾಗದಂತೆ ತಾನು ನೈಷ್ಠಿಕಬ್ರಹ್ಮಚರ್ಯದಲ್ಲಿಯೇ ಇರುವೆನೆಂದೂ ಮಾತು ಕೊಟ್ಟು ಹೇಗಾದರೂ ತನ್ನ ತಂದೆಯ ಇಷ್ಟಾರ್ಥವು ಸಿದ್ಧಿಯಾದರೆ ಸಾಕೆಂದು ಆ ಬೇಡರ ದೊರೆಯ ಮಗಳಾದ ಸತ್ಯವತಿಯೆಂಬಾಕೆಯನ್ನು ತಂದು ತನ್ನ ತಂದೆಗೆ ಮದುವೆಯನ್ನು ಮಾಡಿದನು. ಅನೇಕ ವಿಷಯಸುಖಗಳನ್ನು ಅನುಭವಿಸುವ ಯೋಗ್ಯತೆಯುಳ್ಳ ಮನುಷ್ಯಶರೀರವೂ ಅದರಲ್ಲಿಯೂ ರಾಜಪುತ್ರತ್ವವೂ ಅದರಲ್ಲಿಯೂ ಸರ್ವಸೌಕರ್ಯಸಮೃದ್ಧಿಯೂ ದೊರೆತಿದ್ದರೂ ಭೀಷ್ಮನು ತನ್ನ ತಂದೆಯ ಸುಖದ ಕಡೆಗೆ ಲಕ್ಷ್ಯವಿಟ್ಟು ತನ್ನ ಸುಖಗಳಿಗೆಲ್ಲ ತಿಲತರ್ಪಣವನ್ನು ಕೊಟ್ಟದ್ದು ಬಹು ಹೆಚ್ಚಿನ ಮಾತು.

ಭೀಷ್ಮನು ತಂದೆಗೆ ಇಚ್ಛೆಯಿದ್ದದ್ದನ್ನು ತಿಳಿದು ಪೂರ್ಣಮಾಡಿದನಷ್ಟೆ. ಮಗನ ಈ ಅಸ್ವಾರ್ಥಬುದ್ಧಿಯನ್ನು ನೋಡಿ ತಂದೆಯೂ ಮಗನನ್ನು ಹೊಗಳಿರಬಹುದು. ತಂದೆಗೆ ಹೆಚ್ಚಿನ ಆನಂದವಾದ

ದ್ದನ್ನು ನೋಡಿ ಮಗನಿಗೂ ಹೆಚ್ಚಿನ ಹುರುಪುಹುಟ್ಟಿರಬಹುದು. ರಾಜಪುತ್ರಸ್ಥಾನದ ಇತಿಹಾಸದಲ್ಲಿಯೂ ಇಂಥದ್ದೊಂದುದಾಹರಣೆ ಯಿದೆ. ಮೇವಾರದ ಲಾಕ್ಷನೆಂಬ ರಾಜನಿಗೆ ಮಾರವಾಡದ ರಾಜಪುತ್ರಿ ಯಾದ ಹಂಸಾಬಾಯಿಯ ಮೇಲೆ ಕಣ್ಣಿತ್ತು. ಮಾರವಾಡದ ರಾಜನು ತನ್ನ ಮಗಳ ಹೊಟ್ಟೆಯಲ್ಲಿ ಹುಟ್ಟಿದವನು ರಾಜನಾಗಬೇ ಕೆಂದು ಆಕೆಯನ್ನು ಲಾಕ್ಷನ ಮಗನಾದ ಚಂಡನಿಗೆ ಕೊಡಬೇ ಕೆಂದಿದ್ದನು. ತಂದೆಯ ಉದ್ದೇಶವನ್ನು ಪೂರ್ಣಮಾಡುವದಕ್ಕಾಗಿ ಚಂಡನು ತನ್ನ ಯುವರಾಜಪದವಿಯನ್ನು ಬಿಟ್ಟು ಹಂಸಾಬಾಯಿಯ ಮಗನನ್ನೆ ಸಿಂಹಾಸನದ ಮೇಲೆ ಕೂಡಿಸುವದಾಗಿ ಮಾತು ಕೊಟ್ಟು ಆಕೆಯನ್ನು ತನ್ನ ತಂದೆಗೆ ಜೋಡಿಯಾಗಿ ಮಾಡಿದನು.

ತಂದೆಗೆ ಇಚ್ಛೆ ಇಲ್ಲದಿದ್ದರೂ ಅವನು ಯಾವದಾದರೊಂದು ಧರ್ಮಬಂಧನಕ್ಕೆ ಸಿಕ್ಕಿದ ಸಂದರ್ಭದಲ್ಲಿ ಅವನನ್ನು ಸತ್ಯಸಂಧನ ನ್ನಾಗಿ ಮಾಡುವದಕ್ಕಾಗಿ ತಾನಾಗಿ ಮುಂದೆ ಬಂದು ತನ್ನ ಸರ್ವ ಸ್ವಾರ್ಥಗಳನ್ನೂ ಬಿಟ್ಟು ಪಿತೃವಾಕ್ಯವನ್ನು ಪರಿಪಾಲನೆ ಮಾಡಿದ ಶ್ಲಾಘನೆಯು ಶ್ರೀರಾಮಚರಿತ್ರೆಯಲ್ಲಿ ಒಡೆದು ಮೂಡಿರುವದು. ರಾಮನು ವನವಾಸಕ್ಕೆ ಹೋಗುವದು ದಶರಥನಿಗೆ ಎಳ್ಳಷ್ಟೂ ಇಷ್ಟ ವಿರಲಿಲ್ಲ. ಆದರೆ ಅವನು— "ನಿನಗೆ ಬೇಕಾದ ಎರಡು ವರಗಳನ್ನು ಈಗಲೇ ಕೊಟ್ಟಿರುವೆನು"– ಎಂದು ತನ್ನ ಹೆಂಡತಿಯಾದ ಕೈಕಯಿಗೆ ಮೊದಲು ಮಾತುಕೊಟ್ಟುಬಿಟ್ಟಿದ್ದನು. ಆಮೇಲೆ ಆಕೆ ಮೊದಲನೆ ವರಕ್ಕೆ ರಾಮನ ವನವಾಸವನ್ನು ಕೇಳಿದಳು. ಅದು ಸಲ್ಲದ ಮಾ ತೆಂದು ದಶರಥನು ಎಷ್ಟೋ ಗೋಳಾಡಿದನು. ಆದರೇನು? ಮಾತಾ ಡಿದರೆ ಹೋಯಿತು; ಮುತ್ತೊಡೆದರೆ ಹೋಯಿತು. ರಾಮನು ವನವಾಸಕ್ಕೆ ಹೋಗಬೇಕೆಂದು ಅವನ ಬಾಯಿಂದಂತು ಬರಲಿಲ್ಲ. ತನ್ನ ತಂದೆಯು ಈ ಇಕ್ಕಟ್ಟಿಗೆ ಸಿಕ್ಕಿರುವದನ್ನು ನೋಡಿ ತನಗೆ ತಂದೆಯ ಸ್ಪಷ್ಟವಾದ ಆಜ್ಞೆಯಿಲ್ಲದಿದ್ದರೂ ಇಂಗಿತಜ್ಞನಾಗಿ ಶ್ರೀ ರಾಮಚಂದ್ರನು ವನವಾಸಕ್ಕೆ ಹೋಗಿ ಪಿತೃವಾಕ್ಯಪರಿಪಾಲನೆಯನ್ನು ಮಾಡಿ ಜಗತ್ತಿಗೆಲ್ಲ ಮೇಲುಪಙ್ಕ್ತಿಯನ್ನು ಹಾಕಿಕೊಟ್ಟಿರುವನು.

ತಂದೆಯ ಇಚ್ಛೆಯೂ ಇಲ್ಲದೆ ತಂದೆಯು ಯಾವ ಧರ್ಮಬಂಧ ನಕ್ಕೂ ಒಳಗಾಗದೆಯೂ ಇದ್ದರೂ ತಂದೆಯ ಅಭ್ಯುದಯವನ್ನು ಸಾಧಿಸಿದ್ದಕ್ಕೆ ಉಪನಿಷತ್ತಿನಲ್ಲಿ ಒಂದು ಉದಾಹರಣೆಯಿದೆ. ಒಬ್ಬನು ತನ್ನ ಸರ್ವಸ್ವವನ್ನೂ ದಾನಮಾಡುವಂಥ ವಿಶ್ವಜಿತ್ತೆಂಬ ಯಾಗವನ್ನು ಮಾಡಿದನು. ಅವನಿಗೆ ನಚಿಕೇತನೆಂಬ ಮಗನಿದ್ದನು. ತನ್ನ ತಂದೆಯು ಮುದಿಯಾದ ಗೋವುಗಳನ್ನು ದಾನಮಾಡುತ್ತಿರುವದು ನಚಿಕೇತನ ಕಣ್ಣಿಗೆ ಬಿತ್ತು. ತಂದೆಯ ಸ್ವತ್ತಾಗಿ ತರುಣನಾದ ತಾನಿರುವಾಗ ತನ್ನನ್ನುಳಿಸಿಕೊಂಡು ತಂದೆಯು ಮುದಿಯಾದ ಪಶುಗಳನ್ನು ಮಾತ್ರ ದಾನಮಾಡುತ್ತಿರುವದು ಯೋಗ್ಯವಾಗಿ ಕಾಣಲಿಲ್ಲ. ಇಂಥ ದಾನ ದಿಂದ ತನ್ನ ತಂದೆಯ ಯಾಗವು ಸಾಂಗವಾಗಲಾರದೆನಿಸಿತು. ಮಗ ನನ್ನು ದಾನಮಾಡಬೇಕೆಂದು ತಂದೆಯ ಇಚ್ಛೆ ಇರಲೂ ಇಲ್ಲ ಮತ್ತು ಮಗನನ್ನು ದಾನಮಾಡಲೇ ಬೇಕಾದ ಧರ್ಮಬಂಧನವೂ ತಂದೆಗಿರಲಿಲ್ಲ. ಹೀಗಿದ್ದರೂ ಮಗನು– "ಅಪ್ಪ, ನನ್ನನ್ನು ಯಾರಿಗೆ ಕೊಡುತ್ತಿ?"— ಎಂದು ಎರಡು ಮೂರು ವೇಳೆ ಕೇಳಿದನು. ಇದರಿಂದ ಸಿಟ್ಟಿಗೆದ್ದ ತಂದೆಯು– "ನಿನ್ನನ್ನು ಯಮನಿಗೆ ಕೊಡುತ್ತೇನೆ"–ಎಂದನು. ಇದು ಸಿಟ್ಟಿನಿಂದ ಹೊರಬಿದ್ದ ಮಾತೆಂದು ಮಗನಿಗೂ ತಿಳಿಯಿತು. ಆದರೂ ತಂದೆಯ ಆ ಮಾತನ್ನೇ ಸಾರ್ಥಕವಾಗಿ ಮಾಡಿ ಯಜ್ಞವನ್ನು ಸಾಂಗ ಗೊಳಿಸಬೇಕೆಂದು ನಚಿಕೇತನು ತಂದೆಗೆ ತಿಳಿಸದೆ ಯಮಲೋಕಕ್ಕೆ ಹೋಗಿ ತನ್ನ ದೃಢನಿಶ್ಚಯದಿಂದ ಯಮನನ್ನು ಮೆಚ್ಚಿಸಿ ತನ್ನ ತಂದೆ ಯ ಯಜ್ಞವು ಸಾಂಗವಾಗುವಂತೆ ವರವನ್ನು ಪಡೆದುಕೊಂಡು ಬಂದನು. ಹಿರಿಯರು ಹೇಳದಿದ್ದರೂ ಇಂಗಿತವರಿತು ಮಾಡುವ ವರು ಉತ್ತಮರು; ಹೇಳಿದಂತೆ ನಡೆಸಿಬಿಡುವವರು ಮಧ್ಯಮರು; ಹೇಳಿದರೂ ನಡೆಸದವರು ಅಧಮರು.

ತಂದೆಯ ಮೇಲಿನ ಪ್ರೀತಿಯ ಪರಮಾವಧಿಯ ಪರಿಣಾಮ ವನ್ನು ಪರಶುರಾಮನು ತೋರಿಸಿರುವನು. ಪರಶುರಾಮನ ತಂದೆ ಯಾದ ಜಮದಗ್ನಿಯು ಅರಣ್ಯದಲ್ಲಿ ತಪಶ್ಚರ್ಯೆಯಲ್ಲಿದ್ದಾಗ ಕಾರ್ತ ವೀರ್ಯಾರ್ಜುನನೆಂಬ ಕ್ಷತ್ರಿಯನು ಮೇಲೇರಿ ಬಂದು ನಿಷ್ಕಾರಣ

ವಾಗಿ ಜಮದಗ್ನಿಯನ್ನು ಕೊಂದು ಅವರ ಆಶ್ರಮದ ಆಕಳ ಕರು ವನ್ನು ತೆಗೆದುಕೊಂಡು ಹೋದನು. ತೋಳ ಬಲವಿದ್ದಮಾತ್ರಕ್ಕೇ ಕಂಡಕಂಡವರ ಮೇಲೆ ಅದರ ಪ್ರಯೋಗವನ್ನು ಮಾಡುವ ಈ ಕೆಟ್ಟ ಚಟಕ್ಕೆ ತಕ್ಕ ಬುದ್ಧಿಯನ್ನು ಕಲಿಸಬೇಕೆಂದು ಇದೇ ಸಂದರ್ಭದಲ್ಲಿ ಯೇ ಹಟವನ್ನು ತೊಟ್ಟು ಇಪ್ಪತ್ತೊಂದು ಸಲ ಭೂಮಂಡಲವನ್ನೆಲ್ಲ ಸುತ್ತಿ ಸುತ್ತಿ ಹುಡುಕಿ ಹುಡುಕಿ ದುಷ್ಟಕ್ಷತ್ರಿಯರನ್ನೆಲ್ಲ ಕೊಂದು ಅವರ ರಕ್ತದಿಂದ ಮಾಡಿದ ಸರೋವರದಿಂದ ತನ್ನ ಪಿತೃಗಳಿಗೆ ತರ್ಪ ಣವನ್ನು ಕೊಟ್ಟನು. ಹೀಗೆ ಕಣ್ಣೆದುರಿಗೆ ಪಿತೃವಿಗೆ ತೃಪ್ತಿಯ ನ್ನುಂಟುಮಾಡುವ ಅವಕಾಶವಿಲ್ಲದಿದ್ದರೂ ತನ್ನ ಪಿತೃಸೇವೆಯು ಪರ ಲೋಕಕ್ಕೆ ಕೂಡ ಹೋಗಿ ಮುಟ್ಟುವಂತೆ ಪರಶುರಾಮನು ಮಾಡಿದ ದೀರ್ಘಪ್ರಯತ್ನವು ಅವನ ಪಿತೃಭಕ್ತಿವಿಶೇಷವನ್ನು ತೋರಿಸುವದು.

ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ತನ್ನ ಪಿತೃಗಳಿಗೆ ನಿಜವಾದ ಹಿತವಾಗುವಂತೆ ಮಾಡುವದಕ್ಕೆ ಪ್ರತಿಯೊಬ್ಬ ಮಗನೂ ಬದ್ಧನಾಗಿದ್ದಾನೆ. ವಂಶಪರಂಪರೆಯಿಂದ ಬಂದ ಸತ್ಕರ್ಮಗಳು ಊರ್ಜಿತವಾಗುವಂತೆ ಮನೆತನವು ಬೆಳೆಯಬೇಕೆಂದು ಗೃಹಸ್ಥರೆಲ್ಲರೂ ಸಂತತಿಯನ್ನು ಬಯಸುವರು. ಆದ್ದರಿಂದ ಪಿತೃಗಳಿರುವವರೆಗೂ ಸಾಕ್ಷಾತ್ತಾಗಿ ಅವರ ಹಿರಿಯತನವನ್ನು ಚೆನ್ನಾಗಿ ಸಂಭಾವಿಸಿ ಕೊಂಡಿದ್ದು ಆಮೇಲೆ ಅವರ ಸಂಪ್ರದಾಯಗಳಿಗೆಲ್ಲ ಬಣ್ಣವನ್ನು ಕೊಟ್ಟು ಅವರಿಗೆ ಪರಲೋಕದಲ್ಲಿ ಹೆಚ್ಚಿನ ಆದರವು ದೊರೆಯು ವಂತೆ ಸನ್ಮಾರ್ಗದಲ್ಲಿ ಮುಂದುವರಿದವರು ಕೃತಾರ್ಥರಾಗುವರು.



# ಗುರುಗಳ ಮಹತ್ತ್ವ

"ಗುರು" ಎಂಬ ಸಂಸ್ಕೃತದ ಮಾತಿಗೆ ಭಾರವೆಂದರ್ಥ. ಆದ್ದರಿಂದ ಗುರುಗಳೆಂದರೆ ಭಾರವುಳ್ಳ ಜನರೆಂದಾಯಿತು. ಏತರಿಂದ ಭಾರ? ಸ್ಥೂಲದೃಷ್ಟಿಯಿಂದ ಶರೀರವೆಂದಿಟ್ಟುಕೊಂಡರೆ ವಾತಶರೀರದವರಿಗೆಲ್ಲ ಅನಾಯಾಸವಾಗಿ ಗುರುತ್ವವು ದೊರೆಯುವದು. ಬುದ್ಧಿಶಾಲಿಗಳು ಯಾರೂ ಈ ಅರ್ಥವನ್ನು ಮಾಡಿಕೊಳ್ಳುವದಿಲ್ಲ. ತಿಳಿವಳಿಕೆಯಿಂದ ಭಾರವಾಗಿರತಕ್ಕವರಿಗೆ ಗುರುಗಳೆಂದು ಹೆಸರು—ಎಂದರೆ ಸೂಕ್ಷ್ಮವಿಚಾರಗಳಿಂದ ಜ್ಞಾನವನ್ನು ಪಡೆದಿರುವವರೆಂದರ್ಥ. ಲೋಕದಲ್ಲಿ ವಿಚಾರಶಕ್ತಿಯಿರುವ ಜನರ ಸಂಖ್ಯೆಯೇ ಕಡಿಮೆ. ಹೀಗಿದ್ದರೂ ಉಳಿದ ಬಹುಭಾಗದವರೆಲ್ಲರೂ ಅವರನ್ನೇ ಮುಂದು ಮಾಡಿಕೊಂಡು ಅವರಿಟ್ಟ ಹೆಜ್ಜೆಯ ಗುರ್ತಿನ ಮೇಲೆಯೇ ಹೆಜ್ಜೆಯನ್ನಿಟ್ಟು ನಡೆಯುತ್ತಿರುವರು. ಅವರು ತಾವು ಎಲ್ಲರಂತೆ ಒಬ್ಬರಾಗಿದ್ದರೂ ತಮ್ಮ ಬುದ್ಧಿಶಕ್ತಿಯಿಂದ ಅನೇಕರನ್ನು ನಡೆಸುವ ಭಾರವನ್ನು ವಹಿಸಬಲ್ಲವರಾಗಿರುವರು. ಭೂಮಿಯನ್ನವಲಂಬಿಸಿಕೊಂಡಿರುವವರಿಗಿಂತ ಭೂಮಿಯು ಹೇಗೆ ಭಾರವುಳ್ಳದ್ದೋ ಹಾಗೆ ಅವರನ್ನು ಅವಲಂಬಿಸಿಕೊಂಡಿರುವ ಅನೇಕರಿಗಿಂತ ಅವರು ಭಾರವುಳ್ಳವರು. ಇವರಿಗೇ ಗುರುಗಳೆಂದು ಸಂಜ್ಞೆ. ಜಗತ್ತಿಗೆಲ್ಲ ಹಂಚುವಷ್ಟು ಐಶ್ವರ್ಯವಿದ್ದರೂ ಕೂಡ ಅವರು ಗುರುಗಳೆನಿಸಿಕೊಳ್ಳಲಾಗುವದಿಲ್ಲ. ಜ್ಞಾನಕ್ಕೆ ಮಾತ್ರ ಆ ಹೆಸರು ಮೀಸಲಾಗಿರುವದು.

ತಂದೆತಾಯಿಗಳು ಮೊದಲಾದವರ ಹಿರಿಯತನವೇ ಹೆಚ್ಚಿನದೆಂದು ಹಿಂದಿನ ಪ್ರಕರಣದಲ್ಲಿ ಬಂದಿದೆಯಷ್ಟೆ. ಆ ಹಿರಿಯ ತನವು ಬರೀ ತಾನೊಂದೇ ಇರುವಾಗ ಬೆಳಗುವದೇ ಹೊರತು ಗುರುಗಳ ಮುಂದೆ ಬೆಳಗಲಾರದು. ಒಬ್ಬನು ಎಷ್ಟೇ ಚಿಕ್ಕವನಾಗಿದ್ದರೂ ಜ್ಞಾನದಲ್ಲಿ ದೊಡ್ಡವನಾದರೆ ಅವನಲ್ಲಿ ಗುರುತ್ವವು ತಾನಾಗಿ ಸಿದ್ಧವಾಗಿಯೇ ಬಿಡುವದು. ಇದರಿಂದ ಮಕ್ಕಳು ತಮ್ಮ ಅಭ್ಯುದಯ

ಸ್ಥಿತಿಯಲ್ಲಿ ತಂದೆತಾಯಿಗಳನ್ನು ಕಡೆಗಾಣಬಹುದೆಂದು ಅರ್ಥವನ್ನು ಮಾಡಿಕೊಳ್ಳಬಾರದು. ತಂದೆತಾಯಿಗಳ ಅನುಗ್ರಹದಿಂದಲೇ ಆ ಅಭ್ಯುದಯವು ದೊರಕಿರುವದೆಂದು ತಿಳಿದು ಅವರಲ್ಲಿ ಪೂರ್ವಾಧಿಕವಾದ ಪೂಜ್ಯತೆಯನ್ನೇ ತೋರಿಸಬೇಕು. ಸಾಕ್ಷಾತ್ತಾದ ತಂದೆತಾಯಿಗಳಲ್ಲದ ಹಿರಿಯರ ವಿಷಯದಲ್ಲಿ ಮಾತ್ರ ಪೂಜ್ಯಭಾವವು ಅಷ್ಟು ಹೆಚ್ಚು ಬಿಗಿಯಾಗಿ ಕಾಣುವದಿಲ್ಲ.

"ಅಧ್ಯಾಪಯಾಮಾಸ ಪಿತ್ರ್ಯಾನ್ ಶಿಶುರಾಂಗಿರಸಃ ಕವಿಃ ।
ಪುತ್ರಕಾ ಇತಿ ಹೋವಾಚ ಜ್ಞಾನೇನ ಪರಿಗೃಹ್ಯ ತಾನ್ ॥"

ಎಂದು ಮನುಧರ್ಮಶಾಸ್ತ್ರದಲ್ಲಿ ಉಲ್ಲೇಖವಿದೆ. ಚಿಕ್ಕವಯಸ್ಸಿನವನಾಗಿದ್ದರೂ ಜ್ಞಾನಿಯಾಗಿದ್ದ ಆಂಗಿರಸನು ತಂದೆತಾಯಿಗಳ ವಾವೆಯವರಿಗೆಲ್ಲ ಪಾಠವನ್ನು ಹೇಳುತ್ತ ತನ್ನ ಜ್ಞಾನಬಲದಿಂದ ಅವರನ್ನೆಲ್ಲ ಶಿಷ್ಯರನ್ನಾಗಿ ಮಾಡಿಕೊಂಡು 'ಎಲೆ ಮಕ್ಕಳಿರಾ' ಎಂದು ಸಂಬೋಧನೆ ಮಾಡಿದನಂತೆ. ಅವರು ಇದರಿಂದ ಕೋಪಗೊಂಡು ಬ್ರಹ್ಮನಿಗೆ ದೂರು ಹೇಳಿದರಂತೆ. 'ತಿಳಿವಳಿಕೆಯುಳ್ಳದವರೆಲ್ಲ ಮಕ್ಕಳೇ' ಎಂದು ಬ್ರಹ್ಮನು ಅವರನ್ನು ಸಮಾಧಾನಗೊಳಿಸಿದನಂತೆ. ಈ ಅಭಿಪ್ರಾಯಕ್ಕೆ ಉದಾಹರಣೆಯೆಂಬಂತೆ ತರ್ಕಸಂಗ್ರಹವೆಂಬ ಗ್ರಂಥದಲ್ಲಿ

"ಬಾಲಾನಾಂ ಸುಖಬೋಧಾಯ ಕ್ರಿಯತೇ ತರ್ಕಸಂಗ್ರಹಃ"

ಎಂದು ಬರೆದಿದೆ. ತರ್ಕಸಂಗ್ರಹವೆಂಬ ಗ್ರಂಥವು ಹುಡುಗರಿಗೆ ಸುಲಭವಾಗಿ ತಿಳಿಯುವದಕ್ಕೆ ಬರದದ್ದೆಂದು ಅದರ ಅರ್ಥ. ಇಲ್ಲಿ ಹುಡುಗರೆಂದರೆ ಪ್ರಾಥಮಿಕಶಿಕ್ಷಣದಲ್ಲಿ ಆಟ, ಊಟ, ಓಟ– ಎಂಬ ಮಾತುಗಳನ್ನು ಓದುವ ಸಣ್ಣವರೆಂದಿಟ್ಟುಕೊಂಡರೆ ಅವರಿಗೆ ತರ್ಕಸಂಗ್ರಹವು ಸಲ್ಲುವದೋ? ಇಲ್ಲಿ ಹುಡುಗರೆಂದರೆ ತರ್ಕಶಾಸ್ತ್ರದ ವಿಷಯದಲ್ಲಿ ಇನ್ನೂ ಏನೂ ತಿಳಿಯದವರೆಂದರ್ಥ. ಮುಖ್ಯತಾತ್ಪರ್ಯವೇನೆಂದರೆ ಗುರುತ್ವದ ಮಹತ್ತ್ವವು ಅಂಥಿಂಥ ತಂದೆತಾಯಿ ಮೊದಲಾದವರ ವಾವೆಯ ಹಿರಿಯತನಕ್ಕೆಲ್ಲ ಗ್ರಹಣವನ್ನುಂಟುಮಾಡಿ ತನ್ನ ಬೆಳಕಿನಿಂದ ಉಳಿದವುಗಳನ್ನೆಲ್ಲ ಮುಚ್ಚಿಹಾಕಿಬಿಡುವದು.

ಗುರುತ್ವಕ್ಕೆ ಇಷ್ಟು ಮಹತ್ತ್ವವಿರುವದರಿಂದ ತಂದೆಯನ್ನು ಭಗವದ್ಭಾವನೆಯಿಂದ ಕಾಣಬೇಕೆಂದು ಹೇಳಿದ ವೇದವು ಅದಾದ ಮೇಲೆ "ಆಚಾರ್ಯದೇವೋ ಭವ" ಎಂಬ ಮಾತುಗಳಿಂದ ಗುರುಗಳನ್ನು ಭಗವದ್ಭಾವನೆಯಿಂದ ನೋಡಬೇಕೆಂದು ಹೇಳಿರುವದು. ತಂದೆಯ ಹಿರಿಯತನವನ್ನು ಹೇಳುವಾಗ ಆ ಹಿರಿಯತನಕ್ಕೆ ಅವನು ಜ್ಞಾನದಾತನಾಗುವದೇ ಕಾರಣವೆಂದು ಹೇಳಿದ್ದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಮಗನಿಗೆ ತಿಳಿವಳಿಕೆಯು ತಂದೆಯಿಂದಲೇ ಆರಂಭವಾಗುವದು. ಆದರೆ ಮಗನು ಬಯಸುವ ಎಲ್ಲ ತಿಳಿವಳಿಕೆಯನ್ನೂ ತಂದೆಯಿಂದಲೇ ನಿರೀಕ್ಷಿಸುವದು ಸಾಧ್ಯವಲ್ಲ. ಏಕೆಂದರೆ ತಂದೆಯಲ್ಲಿ ಅಷ್ಟೆಲ್ಲ ಜ್ಞಾನಭಂಡಾರವಿದ್ದೇ ಇರುವದೆಂಬ ನಿಯಮವಿಲ್ಲ; ಇದ್ದರೂ ಅನೇಕ ಪ್ರಾಪಂಚಿಕವ್ಯವಹಾರಗಳ ಗಡಿಬಿಡಿಯಲ್ಲಿ ಅವನು ವಿದ್ಯಾದಾನವನ್ನು ಸಮರ್ಪಕವಾಗಿ ಮಾಡುವ ಸಂಭವವಿಲ್ಲ; ಒಂದು ಪಕ್ಷ ಅದೂ ಆದರೂ ತಂದೆಯ ಮೇಲಿನ ಸಲಿಗೆಯಿಂದ ಗುರುತ್ವಬುದ್ಧಿಯುಂಟಾಗದೆ ವಿದ್ಯೆಯು ವೀರ್ಯವತ್ತರವಾಗದೆ ಹೋಗುವ ಸಂಭವವುಂಟು. ಆದಕಾರಣ ಮನುಷ್ಯನಿಗೆ ಬುದ್ಧಿಶಕ್ತಿಯು ಬಲಿಯುತ್ತ ಬರುತ್ತಲೇ ತಂದೆಗಿಂತ ಬೇರೆಯಾದ ಒಬ್ಬ ಗುರುವಿನ ಅವಶ್ಯಕತೆಯುಂಟಾಗುವದು. ಅಂಥ ಗುರುವನ್ನು ಪಡೆದಾಗ ಮನುಷ್ಯನು ಅವನಲ್ಲಿ ಭಗವದ್ಭಾವನೆಯನ್ನಿಟ್ಟು ಗೌರವಿಸಬೇಕು.

ಆಚಾರ್ಯನೆಂಬ ಮಾತು ಯಾರು ವೇದಾರ್ಥವನ್ನು ಹೇಳುತ್ತಾರೊ ಮತ್ತು ಯಾರು ಜನರನ್ನು ವೇದಮಾರ್ಗದಲ್ಲಿ ನೆಲೆಗೊಳಿಸುತ್ತಾರೊ ಮತ್ತು ವೈದಿಕಧರ್ಮವನ್ನು ಯಾರು ತಮ್ಮ ಅನುಷ್ಠಾನದಲ್ಲಿಟ್ಟುಕೊಂಡಿರುತ್ತಾರೊ ಅವರಿಗೆ ವಿಹಾಸಲಾಗಿರುವದು. ವೇದಾರ್ಥವನ್ನು ಹೇಳುವವರು ಸಿಕ್ಕಬಹುದು; ಆ ಮಾರ್ಗದಲ್ಲಿ ಇತರರನ್ನು ನಡೆಸುವವರೂ ಮತ್ತು ತಾವು ಆ ಧರ್ಮದ ಪ್ರತ್ಯಕ್ಷರವನ್ನೂ ಆಚರಣೆಯಲ್ಲಿಟ್ಟುಕೊಂಡಿರುವವರೂ ದೊರೆಯುವದು ಕಠಿನ. ಒಂದು ಪಕ್ಷ ಇತರರನ್ನು ಆಚಾರದಲ್ಲಿ ನೆಲೆಗೊಳಿಸುವವರನ್ನೂ

ಕಾಣಬಹುದು; ಪರಮಧರ್ಮವನ್ನು ತಮ್ಮ ಆಚರಣೆಯಲ್ಲಿಟ್ಟು ಕೊಂಡಿರುವವರು ಬಹುಕಡಿಮೆ. ಆಚಾರ್ಯಸ್ವರೂಪದ ವಿಷಯ ದಲ್ಲಿ ಬುದ್ಧಗೀತೆಯು ಹೇಳಿರುವ ಅಭಿಪ್ರಾಯವು ಪ್ರಶಂಸನೀಯ ವಾಗಿದೆ. ಅದೇನೆಂದರೆ:— "ಬರೀ ಕಂಠಪಾಠವನ್ನು ಮಾಡಿ ಆಚರಿ ಸದವನು ಆಚಾರ್ಯನಲ್ಲ; ದನಾಕಾಯುವವನು ಕಾಯುವದೇ ಹೊರತು ಹಾಲಿನ ಅಧಿಕಾರಿಯಲ್ಲ." 'ಮಾಡುವದು ಅನಾಚಾರ; ಮನೆಯ ಮುಂದೆ ವೃಂದಾವನ' ಅಥವಾ 'ನುಡಿ ಪುರಾತನ; ನಡೆ ಕಿರಾತನ' ಎಂಬಂತೆ ಶುದ್ಧಾಚರಣೆಯಿಲ್ಲದೆ ಬರೀ ಬಾಯಮಾತಾಡು ವವರಿಗೆ ಆಚಾರ್ಯತ್ವವು ಒಪ್ಪುವದಿಲ್ಲ.

ವೇದಾರ್ಥವನ್ನು ತಾನೂ ತಿಳಿದು ಇತರರಿಗೂ ಹೇಳುತ್ತಿ ದ್ದರೂ ಅದರ ಉಪದೇಶವು ತನ್ನ ಆಚರಣೆಯಲ್ಲಿಲ್ಲದ ಮೇಲೆ ಅವನಿಗೆ ಕೂಡ ಆಚಾರ್ಯನೆಂಬ ಪವಿತ್ರನಾಮಧೇಯವು ಸಲ್ಲುವದಿಲ್ಲವೆಂದ ಮೇಲೆ ಭೌತಿಕವಿಚಾರಗಳನ್ನು ಹೇಳಿಕೊಡುವವರಿಗೆ ಆ ಪದವಿಯು ಎಷ್ಟೋ ದೂರವಾಯಿತು. ಆದರೂ ಯಾವದಾದರೊಂದು ಹೆಚ್ಚಿನ ತಿಳಿವಳಿಕೆಯುಳ್ಳವರೆಲ್ಲ ಆ ವಿಷಯದಲ್ಲಿ ಇತರರಿಗೆ ಗುರುಗಳೆನ್ನುವ ದಕ್ಕೆ ಅಡ್ಡಿ ಇಲ್ಲ. ಸಾಮಾನ್ಯವಾಗಿ ಸರ್ವರನ್ನೂ ಭಗವದ್ಭಾವನೆ ಯಿಂದಲೇ ನೋಡಬೇಕೆಂಬುದು ಪರಮಧರ್ಮವಾಗಿರುವಾಗ ಅಷ್ಟಿ ಷ್ಟು ಹೆಚ್ಚಿನ ತಿಳಿವಳಿಕೆಯುಳ್ಳ ಆ ಗುರುಗಳಲ್ಲಿ ಭಗವದ್ಭಾವನೆಯಿಟ್ಟರೆ ತಾನೆ ತಪ್ಪೇನು? ಅಥವಾ ಅವರಲ್ಲಿ ಪೂಜ್ಯಭಾವವನ್ನಂತು ಇಡಲೇ ಬೇಕು. ಏಕೆಂದರೆ ಗುರುಗಳ ಅನುಗ್ರಹದ ಹೊರತು ಶಿಷ್ಯನಿಗೆ ವಿದ್ಯೆಯು ಹತ್ತುವದಿಲ್ಲ. ಗುರಗಳ ಅನುಗ್ರಹವೆಂದರೇನು? ಶಿಷ್ಯ ನಿಗೆ ವಿದ್ಯೆಯು ತಿಳಿಯಲೆಂಬ ಮನಃಪೂರ್ವಕವಾದ ಇಚ್ಛೆ. ಗುರು ತನ್ನ ಕರ್ತವ್ಯವನ್ನು ತಾನು ಮುಗಿಸಿಬಿಡುತ್ತೇನೆಂದು ತನಗೆ ತಿಳಿದ ರ್ಥವನ್ನು ಸುಮ್ಮನೆ ಶಿಷ್ಯನ ಕಿವಿಯಲ್ಲಿ ಊದಿಬಿಟ್ಟರೆ ಸಾಲದು. ಶಿಷ್ಯನಿಗೆ ತಿಳಿದರೆ ಮಾತ್ರ ಗುರುವಿನ ಕರ್ತವ್ಯವು ಮುಗಿಯುವ ದೆಂಬುದನ್ನು ಗುರು ಮರೆಯಬಾರದು. ಶಿಷ್ಯನ ಮನಸ್ಸಿನ ಪರಿಸ್ಥಿತಿ ಯನ್ನೆಲ್ಲ ವಿಚಾರಕ್ಕೆ ತೆಗೆದುಕೊಂಡು ಅದಕ್ಕೆ ತಕ್ಕ ಹಾಗೆ ಉಪದೇಶ

ಮಾಡುವದಕ್ಕೆ ಶಿಷ್ಯನ ಮೇಲೆ ಗುರುವಿಗೆ ಒಂದು ಬಗೆಯ ಪ್ರಸನ್ನತೆ ಬೇಕಾಗುವದು. ಆ ಪ್ರಸನ್ನತೆಗಾಗಿ ಶಿಷ್ಯನು ಗುರುಗಳ ಮನಸ್ಸನ್ನು ಅನುವರ್ತಿಸಿ ನಡೆಯುತ್ತಿರಬೇಕು.

ಶಿಷ್ಯನು ಸ್ವಸಾಮರ್ಥ್ಯದಿಂದಲೇ ಎಷ್ಟೋ ವಿಷಯಗಳನ್ನು ತಾನೇ ಓದಿ ಗ್ರಹಿಸಬಹುದಾದರೂ ಅದನ್ನೇ ಗುರುಮೂಲಕವಾಗಿ ಪಡೆದರೆ ಅದರ ಬೆಲೆ ಹೆಚ್ಚುವದು. ಈ ವಿಷಯದಲ್ಲಿ ಒಬ್ಬ ಕವಿಯ ಉಕ್ತಿಯು ಚೆನ್ನಾಗಿದೆ.

> **"ಯತ್ಸಾರಸ್ವತವೈಭವಂ ಗುರುಕೃಪಾಪೀಯೂಷಪಾಕೋದ್ಭವಂ |**
> **ತಲ್ಲಭ್ಯಂ ಕವಿನೈವ ನೈವ ಹಠತಃ ಪಾಠಪ್ರತಿಷ್ಠಾಜುಷಾ ||**
> **ಕಾಸಾರೇ ದಿವಸಂ ವಸನ್ನಪಿ ಪಯಃಪೂರಂ ಪರಂ ಪಂಕಿಲಂ |**
> **ಕುರ್ವಾಣಃ ಕಮಲಾಕರಸ್ಯ ಲಭತೇ ಕಿಂ ಸೌರಭಂ ಸೈರಿಭಃ ||"**

ಎಂದರೆ— "ವಿದ್ಯೆಯ ವೈಭವವು ಗುರುವಿನ ಅನುಗ್ರಹಕ್ಕೆ ಪಾತ್ರನಾದವನಿಗೆ ದೊರೆಯುವದೇ ಹೊರತು ಸುಮ್ಮನೆ ಒರಲಿ ಒರಲಿ ಪಾಠಮಾಡಿದ ಮಾತ್ರಕ್ಕೇ ಒರುವದಿಲ್ಲ; ಕೋಣವು ದಿನವೆಲ್ಲ ಕಮಲಗಳಿಂದ ತುಂಬಿರುವ ಕೊಳದಲ್ಲಿದ್ದರೂ ನೀರನ್ನು ಕದಡಿ ಹೊಲಸು ಮಾಡುವದೇ ಹೊರತು ಸುವಾಸನೆಯನ್ನು ಪಡೆಯುವದಿಲ್ಲ." ಆದ್ದರಿಂದ ಗುರುಮೂಲಕವಾಗಿ ವಿದ್ಯಾಭ್ಯಾಸವನ್ನು ಮಾಡಬೇಕು. ಆ ಕಾಲದಲ್ಲಿ ಗುರುವಿನ ಪ್ರಸನ್ನತೆಯನ್ನು ಸಂಪಾದಿಸುವದಕ್ಕಾಗಿ ಶಿಷ್ಯನು ಹೇಗಿರಬೇಕೆಂಬ ವಿಚಾರದಲ್ಲಿ ಸರ್ವಜ್ಞನು ಹೇಳಿರುವದೇನೆಂದರೆ—

> **"ಎತ್ತಾಗಿ, ತೊತ್ತಾಗಿ, ಹಿತ್ತಲ ಹಿಡಮಾಗಿ, |**
> **ಮತ್ತೆ ಪಾದದ ಕೆರವಾಗಿ, ಗುರುವಿನ |**
> **ಹತ್ತಿರಿರು ಎಂದ ಸರ್ವಜ್ಞ ||"**

ಹೀಗೆ ಗುರುವಿನಲ್ಲಿಯೇ ತನ್ಮಯನಾಗಿರುವ ಕಾಲದಲ್ಲಿ ಉಳಿದ ಶಾರೀರಸುಖಸಾಧನಗಳ ಕಡೆಗೆ ಕಡೆಗಣ್ಣನ್ನು ಕೂಡ ಹಾಕಬಾರದೆಂದು ಅವನೇ ಎಚ್ಚರಿಕೆಯನ್ನೂ ಕೊಟ್ಟಿರುವದೇನೆಂದರೆ—

> **"ವಿಷಯಕ್ಕೆ ಕುದಿಯದಿರು; ಅಶನಕ್ಕೆ ಹರಿಯದಿರು; |**
> **ಅಸಮಾಕ್ಷನಡಿಯ ಮರೆಯದಿರು; ಗುರುಪಾದ |**
> **ವಶವರ್ತಿಯಹುದು ಸರ್ವಜ್ಞ ||"**

ಏಕೆಂದರೆ—

"ಹಸಿಯ ಸೌದೆಯ ತಂದು ಅಶನ ಮಾಡಿಬರುಂಟೆ? |
ವಿಷಯಂಗಳುಳ್ಳ ಮನುಜರಿಗೆ ಗುರುಕರುಣ |
ವಶವರ್ತಿಯಹುದೆ? ಸರ್ವಜ್ಞ ||"

ಈ ಬಗೆಯ ಗುರುಸೇವೆಯನ್ನು ಮಾಡಿದವರ ಉದಾಹರಣೆಗಳು ಭಾರತದಲ್ಲಿ ಕೆಲವು ಬಂದಿವೆ. ಆಯೋದಧೌಮ್ಯನೆಂಬ ಗುರುವಿನಲ್ಲಿ ಆರುಣಿಪಾಂಚಾಲನೆಂಬ ಒಬ್ಬ ಶಿಷ್ಯನಿದ್ದನು. ಕಟ್ಟೆಯ ನೀರು ಒಡಕಿನಲ್ಲಿ ಹರಿದು ವ್ಯರ್ಥವಾಗದಂತೆ ತಡೆಯನ್ನು ಹಾಕಿ ಬಾರೆಂದು ಗುರು ಹೇಳಲು ಆ ಕೆಲಸಕ್ಕೆ ಹೋಗಿ ಅವನು ಆ ಒಡಕನ್ನು ಬೇರೆ ಕಲ್ಲುಮಣ್ಣುಗಳಿಂದ ತುಂಬುವದು ತನ್ನೊಬ್ಬನಿಂದ ಸಾಧ್ಯವಾಗಿರಲಿಲ್ಲವಾದ್ದರಿಂದ ತಾನೇ ಆ ಒಡಕಿನ ಬಾಯೊಳಗೆ ರಾತ್ರಿಯೆಲ್ಲ ಅಡ್ಡಬಿದ್ದಿದ್ದನಂತೆ. ಬೆಳಗಾದ ಮೇಲೆ ಗುರುಗಳು ಕಟ್ಟೆಯ ಯೋಗಕ್ಷೇಮವನ್ನು ನೋಡುವದಕ್ಕೆ ಬಂದಾಗ ಪಾಂಚಾಲನು ತನ್ನ ಆತ್ಮಾರ್ಪಣದಿಂದ ಕಟ್ಟೆಯನ್ನುಳಿಸಿದ್ದನ್ನು ಕಂಡು ಅವನ ನಿಷ್ಠೆಗೆ ಪ್ರಸನ್ನರಾಗಿ ಅವನಿಗೆ ಪರಮಾನುಗ್ರಹವನ್ನು ಮಾಡಿದರಂತೆ. ಆ ಗುರುಗಳಲ್ಲಿಯೇ ಒಬ್ಬ ಉಪಮನ್ಯುವೆಂಬ ಉಂಡಾಡಿಗ ಶಿಷ್ಯನಿದ್ದನು. ಅವನನ್ನು ಗುರುಗಳು ದನಾಕಾಯುವ ಕೆಲಸಕ್ಕಿಟ್ಟಿದ್ದರು. ಶಿಷ್ಯನು ಅದನ್ನು ಉಲ್ಲಾಸದಿಂದ ನಡೆಸಿದನು. ಅವನ ಗುರುಭಕ್ತಿಯನ್ನು ಪರೀಕ್ಷಿಸಬೇಕೆಂದು ಅವರು "ನೀನು ತಂದ ಭಿಕ್ಷಾನ್ನವನ್ನೂ ನಮಗೆ ಕೊಟ್ಟುಬಿಡಬೇಕೆ"ಂದರು. ಉಪಮನ್ಯು ಹಾಗೆಯೇ ಮಾಡಿ ತಾನು ತನಗಾಗಿ ಮತ್ತೊಮ್ಮೆ ಭಿಕ್ಷಾನ್ನವನ್ನು ತಂದುಕೊಳ್ಳುತ್ತಿದ್ದನು. ಎರಡನೇ ಸಲ ಭಿಕ್ಷಾನ್ನವನ್ನು ತರುವದು ಸರಿಯಲ್ಲವೆಂದು ಗುರುಗಳು ಹೇಳಿದರು. ಶಿಷ್ಯನು ಅದನ್ನು ಬಿಟ್ಟು ಹಸುಗಳ ಹಾಲನ್ನು ಕುಡಿದುಕೊಂಡು ತನ್ನ ಜೀವಿಕೆಯನ್ನು ಸಾಗಿಸಿದನು. ಗುರುಗಳು ತಮ್ಮ ಸ್ವತ್ತಾದ ಅದನ್ನೂ ಕುಡಿಯ ಕೂಡದೆಂದರು. ಆಮೇಲೆ ಕರುಗಳು ಕುಡಿದ ಮೇಲೆ ಸುರಿದ ನೊರೆಯನ್ನು ಅವನು ಆಹಾರವಾಗಿ ಮಾಡಿಕೊಂಡನು. ಗುರುಗಳು ಇದಕ್ಕೂ ಅಡ್ಡ

ಬಂದರು. ಆಮೇಲೆ ಅವನು ಹಸಿವನ್ನು ತಡೆಯಲಾರದೆ ಎಕ್ಕದೆಲೆಗಳನ್ನು ತಿಂದುಬಿಟ್ಟನು. ಇದರಿಂದ ಅತ್ಯುಷ್ಣವಾಗಿ ಅವನ ಕಣ್ಣು ಹೋಯಿತು. ಒಂದು ದಿನ ಸಾಯಂಕಾಲವಲ್ಲಿ ಅವನು ಒಂದು ಕೊರಕಲಿನೊಳಕ್ಕೆ ಬಿದ್ದು ನರಳುತ್ತಿದ್ದನು. ಗುರುಗಳು ಬಂದು ನೋಡಿ ಕನಿಕರದಿಂದ ಅಶ್ವಿನೀದೇವತೆಗಳನ್ನು ಭಜಿಸೆಂದು ಅವನಿಗೆ ಉಪದೇಶಿಸಿದರು. ಅವನು ಭಜಿಸುತ್ತಲೆ ಅಶ್ವಿನೀದೇವತೆಗಳು ಬಂದು ಒಂದು ಕಜ್ಜಾಯವನ್ನು ಕೊಟ್ಟು ಇದನ್ನು ತಿಂದರೆ ಕಣ್ಣುಬರುವದೆಂದು ಹೇಳಿದರು. ಗುರ್ವಾಜ್ಞೆಯಿಲ್ಲದ್ದರಿಂದ ಅವನು ಅದನ್ನು ತಿನ್ನುವದಕ್ಕೆ ಒಪ್ಪಲಿಲ್ಲ. ನಿನ್ನ ಗುರು ಕೂಡ ಇಂಥ ಸಂದರ್ಭದಲ್ಲಿ ತಿಂದಿದ್ದನೆಂದು ಅಶ್ವಿನೀದೇವತೆಗಳು ಹುರಿದುಂಬಿಸಿದರು. ಅದಕ್ಕೂ ಅವನು ಒಳಗಾಗಲಿಲ್ಲ. ಆಗ ಅವರು "ನಿನ್ನ ಗುರು ತನ್ನ ಗುರುಭಕ್ತಿಯಿಂದ ಉಕ್ಕಿನ ದೇಹವನ್ನು ಪಡೆದಿರುವನು; ನಿನ್ನ ಗುರುಭಕ್ತಿಪ್ರಭಾವದಿಂದ ನಿನ್ನ ದೇಹವು ವಜ್ರದೇಹವಾಗಲಿ" ಎಂದು ಅನುಗ್ರಹಿಸಿದರು. ಈ ನಡೆವಳಿಕೆಗಳು ಈಗಿನ ಕಾಲಕ್ಕೆ ಹೇಗಾದರೂ ಕಾಣಲಿ; ಗುರುಭಕ್ತಿಯಿಂದ ಮಹತ್ಫಲವಾಗುವದೆಂಬ ವಿಷಯಕ್ಕೇನೂ ಸಂಶಯವಿಲ್ಲ.

ಪುರಾಣಕಾಲದ ಮಾತು ಹಾಗಿರಲಿ; ಇತಿಹಾಸಕಾಲವನ್ನು ತೆಗೆದುಕೊಂಡರೂ ಏಕನಾಥಸಾಧುಗಳ ಗುರುಭಕ್ತಿಯು ಒಳ್ಳೆಯ ಮೇಲುಪಙ್ತಿಯಾಗಿದೆ. ಏಕನಾಥರ ಗುರುಗಳಾದ ಜನಾರ್ದನ ಪಂತರು ಒಬ್ಬ ಮುಸಲ್ಮಾನ ರಾಜನ ಕೈಕೆಳಗೆ ಇದ್ದರು. ಆ ಊರಿಗೆ ಒಂದು ದಿನ ಒಮ್ಮೆಗೇ ಶತ್ರುಸೇನೆಯ ಮುತ್ತಿಗೆ ಬಂತು. ಇದನ್ನು ತಿಳಿದೊಡನೆ ಆ ಮಹಮ್ಮದೀಯ ರಾಜನು ಆ ಮುತ್ತಿಗೆಯನ್ನು ಹಿಮ್ಮೆಟ್ಟಿಸುವಂತೆ ಪಂತರಿಗೊಂದು ನಿರೂಪವನ್ನು ಕಳುಹಿಸಿದನು. ಪಂತರು ಆಗ ಧ್ಯಾನಾರೂಢರಾಗಿದ್ದರು. ಅವರನ್ನು ಈ ಸಮಯದಲ್ಲಿ ಎಬ್ಬಿಸಬಾರದೆಂದೂ ಇದರಿಂದ ಕಾರ್ಯಹಾನಿಯೂ ಆಗಬಾರದೆಂದೂ ವಿಚಾರಮಾಡಿ ಒಡನೆ ತಾನೆ ಅವರ ಉಡುಪನ್ನು ಹಾಕಿಕೊಂಡು ಅವರ ಕುದುರೆಯನ್ನೇರಿ ಹೋಗಿ ಶತ್ರುಗಳಿಗೆ ಎದೆಗೊಟ್ಟು ಕಾದಿ ಗೆದ್ದು ಜಯಭೇರಿಯನ್ನು ಹೊಡೆಸಿಕೊಂಡು ಬಂದನು. ಆಮೇಲೆ

ಪಂತರಿಗೆ ಇದು ತಿಳಿಯಿತು. ಅವರಿಗೆ ಆ ಚಿಕ್ಕವಯಸ್ಸಿನ ಏಕಸಾಥರ ಮೇಲೆ ಆಗ ಎಷ್ಟರ ಪ್ರಸನ್ನತೆಯುಂಟಾಗಿರಬಹುದು!

ಇರಲಿ. ಗುರುಗಳಿಗಾಗಿ ಶಿಷ್ಯನು ಯುದ್ಧಕ್ಕೆ ಮೈಗೊಟ್ಟರೂ ಅಪಾಯವೇನೂ ಆಗಲಿಲ್ಲ. ಇಂಥ ಗುರುಭಕ್ತಿಪರಾಯಣರು ಯಾವ ಅಪಾಯಕ್ಕೂ ಹೆದರುವದಿಲ್ಲ. ಶ್ರೀರಾಮಾನುಜಾಚಾರ್ಯರಲ್ಲಿ ಕೂರೇಶರೆಂಬ ಶಿಷ್ಯರಿದ್ದರು. ಕುಲೋತ್ತುಂಗಚೋಳನೆಂಬ ರಾಜನು ದುರ್ಬುದ್ಧಿಯಿಂದ ಶ್ರೀಮದಾಚಾರ್ಯರನ್ನು ಮುಗಿಸಿಬಿಡಬೇಕೆಂದು ಸನ್ನಾಹ ಮಾಡುತ್ತಿರುವಾಗ ಕೂರೇಶರು ಆಚಾರ್ಯರನ್ನು ಮರೆ ಮಾಡಿ ತಾವು ಸಿಕ್ಕಿ ಅವನಿಂದ ಕಣ್ಣು ಕೀಳಿಸಿಕೊಂಡರು. ಇದರಿಂದ ತಿಳಿಯಬೇಕಾದ ತಾತ್ಪರ್ಯವೇನೆಂದರೆ— ಸರ್ವವಿಧದಿಂದಲೂ ಗುರುಗಳ ಹಿತವನ್ನು ಮಾಡುವದಕ್ಕೆ ಯಾರೂ ಎಷ್ಟು ಮಾತ್ರವೂ ಹಿಂದು ಮುಂದು ನೋಡಬಾರದು. ಹೀಗೆ ಗುರುಗಳನ್ನು ತನ್ನ ಸರ್ವಸ್ವವಾಗಿ ಭಾವಿಸಿ ವಿದ್ಯೆಯನ್ನು ಕಲಿತರೆ 'ತಂದೆಯಂತೆ ಮಗ' ಆದಂತೆ 'ಗುರುವಿನಂತೆ ಶಿಷ್ಯ'ನೂ ಆಗುವನು.

ಗುರುಗಳು ಶಿಷ್ಯನ ಗುಣಗಳನ್ನು ಪರೀಕ್ಷೆಮಾಡಿ ಗುಣದ ಮೇಲೆ ಪ್ರಸನ್ನರಾಗುವಂಥವರಾಗಬೇಕೇ ಹೊರತು ಶಿಷ್ಯನಿಂದ ಆದಷ್ಟು ಹಣವನ್ನು ಎತ್ತಿಹಾಕಬೇಕೆಂಬ ಯೋಚನೆಯುವರಾಗಬಾರದು. ಹಣಕ್ಕಾಗಿ ವಿದ್ಯೆಯನ್ನು ಕೊಡುವದು ನಮ್ಮ ಸಂಪ್ರದಾಯವಲ್ಲ. ಶಿಷ್ಯನು ವಿದ್ಯೆಯನ್ನು ಕಲಿತ ಮೇಲೆ ಏನಾದರೂ ದಕ್ಷಿಣೆಯನ್ನು ಕೊಟ್ಟರೆ ಮಾತ್ರ ಗುರುಗಳು ಅದನ್ನು ತೆಗೆದುಕೊಳ್ಳಬಹುದು. ಆದರೆ ಹಾಗೆ ತೆಗೆದುಕೊಳ್ಳುವದಕ್ಕೆ ಮುಂಚೆ ತಾವು ಕಲಿಸಿದ ವಿದ್ಯೆ ಶಿಷ್ಯನಿಗೆ ಬಂದಿರುವದನ್ನು ಅವರು ಮನಗಾಣಬೇಕು. ಅವರು ಬರೀ ತಮ್ಮ ಶ್ರಮೆಗೆ ಪ್ರತಿಫಲವನ್ನು ಪಡೆಯಬಾರದು. ಹಿಂದೆ ಯಾಜ್ಞ್ಯವಲ್ಕ್ಯರೆಂಬ ಗುರುಗಳು ಜನಕರಾಜನಿಗೆ ಅನೇಕವಿಷಯಗಳನ್ನು ತಿಳಿಯಹೇಳುತ್ತ ಬಂದರು. ಒಂದೊಂದು ವಿಷಯವನ್ನು ತಿಳಿಯಹೇಳುತ್ತಲೆ ಜನಕನು ಆನೆಯಂಥ ಸಾವಿರಾರು ವೃಷಭಗಳನ್ನು ಕೊಡುತ್ತೇನೆಂದು ಮುಂದೆ ಬರುತ್ತಿದ್ದನು. ಯಾಜ್ಞ್ಯವಲ್ಕ್ಯರು ಮುಖ್ಯವಿಷಯವ

ನ್ನಿನ್ನೂ ತಿಳಿಸಿರಲಿಲ್ಲವಾದ್ದರಿಂದ, ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ ದಕ್ಷಿಣೆಯನ್ನು ಪಡೆಯಕೂಡದೆಂದು ತಂದೆಯ ಆಜ್ಞೆಯಾಗಿದ್ದುದರಿಂದಲೂ ಮತ್ತು ತಮ್ಮ ಅಭಿಪ್ರಾಯವೂ ಹಾಗೆಯೇ ಇದ್ದುದರಿಂದಲೂ ಅವರು ಆಗ ಯಾವ ದಕ್ಷಿಣೆಯನ್ನೂ ಹಿಡಿಯಲಿಲ್ಲ.

ಆದರೆ ಗುರುಗಳನ್ನು ಹಣದಾಸೆಯ ದೆವ್ವವು ಹಿಡಿದಿಲ್ಲವೆಂದು ಶಿಷ್ಯನು ಗುರುದಕ್ಷಿಣೆಗೆ ಸೊನ್ನೆಸುತ್ತುವ ಯೋಚನೆಯನ್ನೆಂದಿಗೂ ಮಾಡಬಾರದು. ಆಸೆಯನ್ನು ಮಾಡದಿರುವದು ಅವರ ಧರ್ಮ; ನಮ್ಮ ಯೋಗ್ಯತೆಗೆ ತಕ್ಕಂತೆ ಕೈಬಿಟ್ಟು ಕೊಡುವದು ನಮ್ಮ ಧರ್ಮ. "ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾವ್ಯವಚ್ಛೇತ್ಸೀಃ" ಎಂದು ವೇದದಲ್ಲಿ ಆಜ್ಞೆಯಿದೆ. ವಿದ್ಯೆಯನ್ನು ಕಲಿತ ಮೇಲೆ ಗುರುವಿನ ಮನಸ್ಸಿಗೊಪ್ಪುವ ದಕ್ಷಿಣೆಯನ್ನು ಕೊಟ್ಟು ಮದುವೆಯನ್ನು ಮಾಡಿಕೊಳ್ಳಬೇಕೆಂದು ಅದರ ತಾತ್ಪರ್ಯ. ದಕ್ಷಿಣೆಯನ್ನು ಕೊಡದೆ ಇದ್ದರೆ ವಿದ್ಯೆಯು ಅವನಿಗೆ ಒಲಿಯುವದಿಲ್ಲವೆಂದು ಹೇಳುತ್ತಾರೆ. ಆದ್ದರಿಂದ ಅದೊಂದು ಸಂಪ್ರದಾಯವಾಗಿಬಿಟ್ಟಿದೆ.

"ಧರೆಗಾಚಾರಮನರುಪಲ್ ।
ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ ॥
ಗುರುದಕ್ಷಿಣೆಯಂ ಬೇಡೆನೆ ।
ಗುರುವುಂ ಬೇಡಲ್ಕೆ ಬಗೆದನೊಂದದ್ಭುತಮಂ ॥

ಎಂದು ಶ್ರೀಜಗನ್ನಾಥವಿಜಯದಲ್ಲಿರುವಂತೆ ಸಾಂದೀಪನೆಂಬ ಗುರುವಿನಲ್ಲಿ ಧನುರ್ವಿದ್ಯೆಯನ್ನು ಕಲಿತ ಶ್ರೀಕೃಷ್ಣನು ಗುರುದಕ್ಷಿಣೆಯನ್ನು ಮುಟ್ಟಿಸಲು ತಮ್ಮ ಇಷ್ಟಾರ್ಥವೇನೆಂದು ಗುರುಗಳನ್ನು ಕೇಳಿದನು. ಅವರು ತಮ್ಮ ಮೃತಪುತ್ರನನ್ನು ಯಮಲೋಕದಿಂದ ತಂದು ಕೊಡಬೇಕೆಂದು ಕೇಳಿದರು. ಶ್ರೀಕೃಷ್ಣನೂ ಅದರಂತೆ ಮಾಡಿದನು. ಇದು ಶ್ರೀಕೃಷ್ಣನ ಯೋಗ್ಯತೆಯನ್ನು ಮನಗಂಡು ಬಯಸಿದ ಬಯಕೆ. ಇದರ ಮಾತಿರಲಿ. ಅರ್ಜುನನು ದ್ರೋಣಾಚಾರ್ಯರಲ್ಲಿ ಧನುರ್ವಿದ್ಯೆಯನ್ನು ಕಲಿತನಷ್ಟೆ. ತನಗೆ ಬಾಲ್ಯಸ್ನೇಹಿತನಾಗಿದ್ದ ಯೌವನ

ದಲ್ಲಿ ರಾಜ್ಯಮದದಿಂದ ತನ್ನನ್ನು ಗುರ್ತಿಸದೆ ಹೋದ ದ್ರುಪದನನ್ನು ತಂದು ತನ್ನ ಪಾದದ ಮೇಲೆ ಉರುಳುಬಿಡಬೇಕೆಂದು ದ್ರೋಣಾ ಚಾರ್ಯರು ಅರ್ಜುನನ ಮುಂದೆ ತಮಗೆ ಬೇಕಾದ ಗುರುದಕ್ಷಿಣೆಯ ಸ್ವರೂಪವನ್ನಿಟ್ಟರು. ಅರ್ಜುನನು ಅದರ ಪ್ರತ್ಯಕ್ಷರವನ್ನೂ ನಡೆಸಿ ತೋರಿಸಿ ತಾನು ಕೃತಾರ್ಥನಾದನು. ಇಲ್ಲಿ ತಿಳಿಯಬೇಕಾದದ್ದೇ ನೆಂದರೆ ಗುರುಗಳಿಗೆ ಕೊಡಬೇಕಾದ ಗುರುದಕ್ಷಿಣೆಯ ಸ್ವರೂಪವು ಗುರುಗಳ ಯೋಗ್ಯತೆಯ ಮೇಲೆ ನಿರ್ಣಯವಾಗುವದಿಲ್ಲ. ಏಕೆಂದರೆ ಅವರ ಯೋಗ್ಯತೆಯು ಅತ್ಯಂತ ಮಹತ್ತ್ವದ್ದಾಗಿರುವದು. ಅದಕ್ಕೆ ಬೆಲೆಯನ್ನು ಕಟ್ಟುವದು ಯಾರಿಂದಾದೀತು? ಶಿಷ್ಯನ ಯೋಗ್ಯತೆಯ ಮೇಲೆಯೇ ಅದರ ನಿಷ್ಕರ್ಷೆ. ಶಿಷ್ಯನು ತನ್ನ ಸರ್ವಸ್ವವನ್ನು ಕೊಟ್ಟರೂಕೂಡ ಗುರುಗಳಿಗೆ ಅದೊಂದು ಕ್ಷುದ್ರವಿಷಯವೆ. ಶಿವಾಜಿ ಮಹಾರಾಜನು ತನ್ನ ಗುರುಗಳಾದ ಸಮರ್ಥರಾಮದಾಸರಿಗೆ ತನ್ನ ರಾಜ್ಯವನ್ನೆಲ್ಲ ದಾನಪತ್ರದಲ್ಲಿ ಒರೆದು ಜೋಳಿಗೆಯಲ್ಲಿ ಹಾಕಿ ದನು. ಆದರೂ ಅದಕ್ಕೇನೂ ಅವರು ಬಾಯಿನೀರು ಕರೆಯಲಿಲ್ಲ. ಈ ವಿಷಯದಲ್ಲಿ ಶ್ರೀವಿದ್ಯಾರಣ್ಯಕಾವ್ಯದಲ್ಲಿ ಅವರ ಗುರುಗಳು ಹೇಳಿ ರುವ ಒಂದುಪದೇಶವಾಕ್ಯವು ನೆನಪಿಡತಕ್ಕದ್ದಾಗಿದೆ.—

> "ಗುರುಗಳ್ಗೆ ಧರೆಯ ಧಾರೆಯ ।
> ನೆರೆದೊಡಮದು ಪಾದಪೂಜೆಯೇ ಎಂದೆನಿಕುಂ ॥
> ಅರಿಯಲ್ಕಧರ್ಮದ ವೃದ್ಧಿಗೆ ।
> ನೆರವಪ್ಪುದೆ ಪೂಜೆ ಜನಕುಮೆನ್ನಯ ಮನಕುಂ ॥"

ಇದರಂತೆ ಶ್ರೀವಿದ್ಯಾರಣ್ಯರು ತಮ್ಮ ಗುರುಗಳಿಗೆ ಧರ್ಮೋ ದ್ಧಾರರೂಪವಾದ ಗುರುದಕ್ಷಿಣೆಯನ್ನೇ ಕೊಟ್ಟು ಮುಗಿಸಿದ್ದಾರೆ. ಶ್ರೀರಾಮಾನುಜಾಚಾರ್ಯರ ಗುರುಗಳಾದ ಯಾಮುನಾಚಾರ್ಯರು ತಮ್ಮ ಸಿದ್ಧಾಂತವನ್ನು ಸ್ಥಾಪಿಸುವ ಭಾಷ್ಯದ ರೂಪವಾದ ಗುರು ದಕ್ಷಿಣೆಯ ಬಯಕೆಯಿರುವದೆಂದು ಸೂಚಿಸುವಂತೆ ತಮ್ಮ ಅಂತ್ಯಕಾಲ ದಲ್ಲಿ ತಮ್ಮದೊಂದು ಬೆಟ್ಟನ್ನು ಮಡಿಸಿಕೊಂಡು ತಮ್ಮ ಜೀವನಯಾತ್ರೆ ಯನ್ನು ಮುಗಿಸಿರುತ್ತಾರೆ. ಇದನ್ನೆಲ್ಲ ನೋಡಿದರೆ ಧರ್ಮೋದ್ಧಾರವು

ಗುರುದಕ್ಷಿಣೆಯ ಸ್ವರೂಪಗಳಲ್ಲಿ ಉಚ್ಚಸ್ಥಾನವನ್ನು ಪಡೆದಿರುವ ದೆಂದು ತೋರುತ್ತದೆ.

ಏಕಲವ್ಯನೆಂಬುವನು ಕೊಟ್ಟ ಗುರುದಕ್ಷಿಣೆಯು ಅವನ ಗುರು ಭಕ್ತಿಯ ಪರಮಾವಧಿಯನ್ನು ವ್ಯಕ್ತಮಾಡುತ್ತದೆ. ಏಕಲವ್ಯನೆಂಬುವನು ಭಿಲ್ಲಜಾತಿಯವನು. ಅವನು ಧನುರ್ವಿದ್ಯೆಯನ್ನು ಕಲಿಯಬೇಕೆಂದು ದ್ರೋಣಾಚಾರ್ಯರ ಬಳಿಗೆ ಬಂದನು. ದ್ರೋಣಾಚಾರ್ಯರು ಕೌರವಪಾಂಡವರಿಗೆ ಧನುರ್ವಿದ್ಯೆಯನ್ನು ಕಲಿಸುತ್ತಿದ್ದರು. ಆ ಸಮಯದಲ್ಲಿ ಅವರು ಅಸ್ತ್ರಗಳನ್ನು ಹೇಳಿಕೊಡುವಾಗ ಮಂತ್ರಗಳನ್ನು ಉಪದೇಶಮಾಡಬೇಕಾಗಿತ್ತಾದ್ದರಿಂದ ವೇದಮಂತ್ರವನ್ನು ತೆಗೆದುಕೊಳ್ಳುವದಕ್ಕೆ ಅರ್ಹರಾದ ಬ್ರಾಹ್ಮಣಕ್ಷತ್ರಿಯರಿಗೆ ಮಾತ್ರ ಅವರು ಕಲಿಸುವದಕ್ಕೆ ಸಿದ್ಧರಾಗಿದ್ದರು. ಆದ್ದರಿಂದ ಅವರು ಏಕಲವ್ಯನನ್ನು ಶಿಷ್ಯನನ್ನಾಗಿ ಪರಿಗ್ರಹಿಸಲಿಲ್ಲ. ಆದರೂ ಅವನು ನಿರಾಶನಾಗದೆ ಕಾಡಿಗೆ ಹೋಗಿ ಅವರದೊಂದು ಮೂರ್ತಿಯನ್ನು ಮಾಡಿ ಮುಂದಿಟ್ಟುಕೊಂಡು ಅದರಲ್ಲಿ ಗುರುಭಕ್ತಿಯನ್ನಿಟ್ಟು ಅದರ ಮುಂದೆ ತನ್ನ ಸಾಧನವನ್ನು ಮಾಡಿದನು. ಅವನ ಗುರುಭಕ್ತಿಪ್ರಭಾವದಿಂದ ಅದೆಲ್ಲ ಅವನಿಗೆ ಬಂತು. ಆಮೇಲೊಂದು ದಿನ ದ್ರೋಣಾಚಾರ್ಯರು ಆ ಕಾಡಿಗೆ ತಮ್ಮ ಶಿಷ್ಯರೊಡನೆ ಬೇಟೆಗೆ ಬಂದಾಗ ಕೌರವರ ಒಂದು ನಾಯಿ ಎಲ್ಲಿಯೋ ಬಗುಳುತ್ತಿತ್ತು. ಅದರಿಂದ ತನ್ನ ಅನುಸಂಧಾನಕ್ಕೆ ಅಡ್ಡಿಯಾದದ್ದನ್ನು ತಿಳಿದು ಏಕಲವ್ಯನು ಆ ನಾಯನ್ನು ಪ್ರತ್ಯಕ್ಷವಾಗಿ ಕಾಣದಿದ್ದರೂ ಅದರ ಧ್ವನಿಯನ್ನೇ ಹಿಡಿದು ಹೋಗುವಂತೆ ಬಾಣವನ್ನು ಬಿಟ್ಟು ಬಾಣದಿಂದಲೇ ಅದರ ಬಾಯನ್ನು ತುಂಬಿಬಿಟ್ಟನು. ಈ ಚಮತ್ಕಾರದ ಸುದ್ದಿಯು ದ್ರೋಣರಿಗೆ ಮುಟ್ಟಿತು. ಒಡನೆ ಅವರು ಅದಕ್ಕೆ ಬೆರಗಾಗಿ ಏಕಲವ್ಯನಿಗೆ ದರ್ಶನವನ್ನು ಕೊಟ್ಟು ತಮ್ಮಿಂದ ವಿದ್ಯೆಯನ್ನು ಕಲಿತದ್ದಕ್ಕೆ ಗುರುದಕ್ಷಿಣೆಯಾಗಿ ಬಲಗೈಯ ಹೆಬ್ಬೆರಳನ್ನು ಕೊಡಬೇಕೆಂದು ಕೇಳಿದರು. ಆ ಹೆಬ್ಬೆರಳನ್ನು ಕೊಟ್ಟರೆ ತಾನು ಕಲಿತಿರುವ ವಿದ್ಯೆಯ ಚಮತ್ಕಾರವು ಇನ್ನು ಮುಂದೆ ಹೊರಬೀಳದೆಂದು ಅವನಿಗೆ ಗೊತ್ತಿತ್ತು. ಗುರುದಕ್ಷಿಣೆಯನ್ನು ಕೊಡದೆ

ಹೋದರೆ ವಿದ್ಯೆಯು ಫಲಿಸುವದಿಲ್ಲವಾದ್ದರಿಂದ ಕೊಡುವದೇ ಉತ್ತಮವೆಂದು ಅವನು ಆ ಹೆಬ್ಬೆಟ್ಟನ್ನು ಕೊಯ್ದು ಕೊಟ್ಟೇಬಿಟ್ಟನು. 'ದ್ರೋಣರು ಏಕಲವ್ಯನ ವಿದ್ಯೆಯನ್ನು ಹೀಗೆ ಮುಳುಗಿಸಬಹುದೋ?' ಎಂಬುದೂ ವಿಚಾರಾರ್ಹವೇ ಆಗಿದೆ. ಮಂತ್ರವಿದ್ಯೆಗೆ ವರ್ಣಾಶ್ರಮ ನಿಯಮವುಂಟು. ಏಕಲವ್ಯನಿಗೆ ಧನುರ್ವಿದ್ಯೆಯ ಇಚ್ಛೆಯುಂಟಾದ್ದರಿಂದಲೇ ಅವನಲ್ಲಿ ಉತ್ತಮವರ್ಣದ ಸಂಸ್ಕಾರವಿರುವದೆಂದು ಕಂಡರೂ ಅವನು ಜನಿಸಿರುವ ವರ್ಣದ ದೃಷ್ಟಿಯಿಂದ ಅವನಲ್ಲಿ ಇತರಸಂಸ್ಕಾರಗಳ ಬಾಹುಲ್ಯವೂ ಇರುವದೆಂದು ಸ್ಪಷ್ಟವಾಗುತ್ತದೆ. ಒಂದು ಉತ್ತಮಸಂಸ್ಕಾರವನ್ನು ಕಂಡು ಆತುರದಿಂದ ಅದನ್ನು ಅರಳಿಸುವದಕ್ಕೆ ಹೋದರೆ ಅದರ ವಿರುದ್ಧಸಂಸ್ಕಾರಗಳು ಆ ಶುಭವಾಸನೆಯನ್ನು ದುರುಪಯೋಗಮಾಡಬಹುದೆಂಬ ಭೀತಿಯಿಂದ ಜನ್ಮದ ವರ್ಣಕ್ಕೆ ಹೆಚ್ಚು ಲಕ್ಷ್ಯವನ್ನು ಕೊಡಬೇಕೆಂದು ದ್ರೋಣರು ಆಲೋಚಿಸಿದಂತೆ ತೋರುತ್ತದೆ. ಅದು ಹೇಗಾದರೂ ಇರಲಿ; ಇಲ್ಲಿ ನಾವು ಗ್ರಹಿಸಬೇಕಾದದ್ದು ಏಕಲವ್ಯನ ಗುರುಭಕ್ತಿಪರಾಯಣತೆ. ಮುಖ್ಯ ತಾತ್ಪರ್ಯವೇನೆಂದರೆ ಗುರು ಎಷ್ಟೇ ವಿರಕ್ತನಾಗಿದ್ದರೂ ಶಿಷ್ಯನು ತಾನು ಕಲಿತ ವಿದ್ಯೆಗಾಗಿ ಗುರುವಿಗೆ ಗುರುದಕ್ಷಿಣೆಯನ್ನು ಕೊಡುವದರಲ್ಲಿ ಹಿಂದುಮುಂದು ನೋಡಬಾರದು. ಈ ವಿಷಯದಲ್ಲಿ ವಿದ್ಯಾನಂದಕವಿಯು ಹೇಳಿರುವದೇನೆಂದರೆ—

"ಮಕ್ಕಳನೋದಲಿಟ್ಟು ಬಿಡದೋದಿಸುವರ್ಗೆ ಮನೀಷಿತಾರ್ಥಮಂ।
ದೊಕ್ಕನೆ ಕೊಟ್ಟು ಮನ್ನಿಸದೆ, ಬೇಡಿದೊಡೀಯದೆ, ವಂಚನೋಕ್ತಿಯಿಂ।
ಕಕ್ಕಸಮಾಗಿ ಕಾಲಮನೆ ನೂಂಕಿ ಕುಡಲ್ಮನಮಿಲ್ಲದಿದ್ದರಾ।
ಮಕ್ಕಳ ಬುದ್ಧಿ ಕೆಟ್ಟು ಜಡರಪ್ಪರವರ್ಗಳುಮುತ್ತರೋತ್ತರಂ॥"

ಮನುಷ್ಯನು ಮಾಡಬಹುದಾದ ಮತ್ತು ಮಾಡಬಾರದಾದ ಕಾರ್ಯಗಳು ಯಾವವೆಂಬದಕ್ಕೆ ಮುಖ್ಯವಾಗಿ ಶಾಸ್ತ್ರವೇ ಪ್ರಮಾಣವಾದರೂ ಗುರುವಿನ ಆಜ್ಞೆಯ ಮುಂದೆ ಶಾಸ್ತ್ರದ ಮಾತು ಕೂಡ ತಗುರವಾದದ್ದಾಗುವದು. ಮಹಾರಾಷ್ಟ್ರ ಸಾಧುಶಿರೋಮಣಿಯಾದ ಜ್ಞಾನದೇವನ ತಂದೆಯಾದ ವಿಠಲಪಂತನು ಕಾಶಿಗೆ ಹೋಗಿ ರಾಮಾನಂದರೆಂಬ ಗುರುಗಳನ್ನು ಸೇರಿ ತಾನು ಹೆಂಡತಿ ಮೊದಲಾದ

ವರಿಲ್ಲದವನೆಂದು ಸುಳ್ಳುಹೇಳಿ ಸಂನ್ಯಾಸಿಯಾದನು. ಇದಾದ ಕೆಲವು ದಿವಸದ ಮೇಲೆ ರಾಮಾನಂದರು ಸಂಚಾರಕ್ಕೆ ಹೊರಟು ಅಳಂದಿ ಯೆಂಬ ಗ್ರಾಮಕ್ಕೆ ಬಂದರು. ಅದು ವಿಠಲಪಂತನ ಊರೆಂದು ರಾಮಾನಂದರಿಗೆ ತಿಳಿದಿರಲಿಲ್ಲ. ವಿಠಲಪಂತನು ಕಾಶಿಯಲ್ಲಿ ಇವರ ಶಿಷ್ಯನಾಗಿರುವದು ಮಾತ್ರ ಹೇಗೋ ಅವನ ಹೆಂಡತಿಗೆ ತಿಳಿದಿತ್ತು. ಆಕೆ ಸ್ವಭಾವವಾಗಿ ಅಲ್ಲಿಗೆ ಬಂದು ಆ ಸಂನ್ಯಾಸಿಗಳಿಗೆರಗಿದಳು. ಅವರು ತಮ್ಮ ಪದ್ಧತಿಯಂತೆ 'ಮಕ್ಕಳನ್ನು ಪಡೆ'ಯೆಂದು ಆಶೀರ್ವಾದ ಮಾಡಿದರು. ಆಗ ಆಕೆ ತನ್ನ ಸ್ಥಿತಿಗತಿಯನ್ನೆಲ್ಲ ಅವರೆದುರಿಗೆ ಬಿಚ್ಚಿ ಹೇಳಿದಳು. ಒಡನೆ ಅವರು ಹಿಂದಕ್ಕೆ ಬಂದು ವಿಠಲಪಂತನನ್ನು ಕರೆದು ಹೆಂಡತಿಯೊಡನೆ ಸಂಸಾರಮಾಡಿಕೊಂಡಿರೆಂದು ಆಜ್ಞೆಮಾಡಿ ದರು. ಸಂನ್ಯಾಸಿಯು ಗೃಹಸ್ಥಾಶ್ರಮಕ್ಕೆ ಹಿಂದಿರುಗುವದು ಶಾಸ್ತ್ರ ದೃಷ್ಟಿಯಿಂದ ಅತ್ಯಂತನಿಂದ್ಯವಾದದ್ದು. ಇದನ್ನು ತಿಳಿದಿದ್ದರೂ ವಿಠಲಪಂತನು ಗುರುವಾಕ್ಯದ ಮುಂದೆ ಶಾಸ್ತ್ರಕ್ಕೆ ಬೆಲೆಯಿಲ್ಲವೆಂದು ತಿಳಿದು ಅವರು ಹೇಳಿದ ಪ್ರತ್ಯಕ್ಷರವನ್ನೂ ಪಾಲಿಸಿಬಿಟ್ಟನು. ಆಮೇಲೆ ಅವನ ಹೊಟ್ಟೆಯಲ್ಲಿ ಹುಟ್ಟಿದ ಜ್ಞಾನದೇವ ಮೊದಲಾದ ಮಕ್ಕಳೆಲ್ಲ ಜಗತ್ಪ್ರಸಿದ್ಧರಾದ ಸಾಧುಶಿರೋಮಣಿಗಳಾಗಿ ಯಶಸ್ವಿಗಳಾದರು.

ಶ್ರೀರಾಮಚಂದ್ರನು ಕೂಡ ಶಾಸ್ತ್ರಕ್ಕಿಂತ ಗುರುವಾಕ್ಯಕ್ಕೆ ಹೆಚ್ಚಿನ ಮಹತ್ತ್ವವನ್ನು ಕೊಟ್ಟ ಉದಾಹರಣೆಯಿದೆ. ಸಾಮಾನ್ಯ ವಾಗಿ ಶೂರರು ಸ್ತ್ರೀಯರ ಮೇಲೆ ಕೈಮಾಡುವದೇ ಯೋಗ್ಯವಲ್ಲ. ಅದರಲ್ಲಿಯೂ ಮೊದಲನೇ ಪ್ರಯೋಗವೇ ಸ್ತ್ರೀಯ ಮೇಲೆಂಬುದಂತು ಹೆಚ್ಚು ನಿಂದಾಸ್ಪದವಾದದ್ದು. ಹೀಗಿದ್ದರೂ ವಿಶ್ವಾಮಿತ್ರರು ತಾಟಕಿ ಯೆಂಬ ರಾಕ್ಷಸಿಯನ್ನು ತೋರಿಸಿ ಅವಳಿಗೆ ಬಾಣವನ್ನು ಗುರಿ ಯಿಡೆಂದು ಹೇಳುತ್ತಲೇ ಶ್ರೀರಾಮಚಂದ್ರನಿಗೆ ಗುರುವಾಕ್ಯದ ಮುಂದೆ ತದ್ವಿರುದ್ಧವಾದ ಯಾವ ಕಲ್ಪನೆಯು ಅಲೆಯೂ ಮನಸ್ಸಿನಲ್ಲಿ ಏಳಲೇ ಇಲ್ಲ. ಗುರ್ವಾಜ್ಞೆಯೆಂದು ಅವನು ಅದನ್ನು ನಡೆಸಿಯೇ ಬಿಟ್ಟನು.

ಗುರುಗಳು ಸಾಕ್ಷಾತ್ತಾಗಿ ಎದುರಿಗಿರಲಿ ಇಲ್ಲದಿರಲಿ; ಅವರ ವಿಷಯಕವಾದ ಪೂಜ್ಯಬುದ್ಧಿಯು ಮಾತ್ರ ನಮ್ಮಲ್ಲಿ ಯಾವಾಗಲೂ ಜಾಗರೂಕವಾಗಿರಬೇಕು. ಇದನ್ನು ಶ್ರೀರಾಮಚಂದ್ರಮೂರ್ತಿಯು ಬಹುಚೆನ್ನಾಗಿ ತೋರಿಸಿದ್ದಾನೆ. ಅವನು ಕಿಷ್ಕಿಂಧೆಯ ಕಡೆಗೆ ಬರುವಾಗ ದಾರಿಯಲ್ಲಿ ಸಮೀಪದಲ್ಲಿ ಒಂದು ಕಡೆ ಸಪ್ತಜನರೆಂಬ ಏಳು ಜನ ಮಹರ್ಷಿಗಳಿರುವರೆಂದು ಅವನಿಗೆ ಸುದ್ದಿ ತಿಳಿಯಿತು. ಅವನು ಅವರ ಸಮೀಪಕ್ಕೆ ಹೋಗದಿದ್ದರೂ ಇದ್ದಕಡೆಯಿಂದಲೇ ಆ ದಿಕ್ಕಿಗೇ ನಮಸ್ಕಾರವನ್ನು ಮಾಡಿ ಮುಂದೆ ಸಾಗಿದ್ದಾನೆ.

ಗುರುಗಳ ವಿಷಯದಲ್ಲಿ ಅನಾದರವನ್ನು ಮಾಡಿದರಂತು ಅಶ್ರೇಯಸ್ಸು ಮಡಿಲಿಗೆ ಬೀಳದೆ ತಪ್ಪುವದೇ ಇಲ್ಲ. ಒಮ್ಮೆ ದೇವತೆಗಳ ಸಭೆಗೆ ಬೃಹಸ್ಪತ್ಯಾಚಾರ್ಯರು ಬಂದಾಗ ಇಂದ್ರನು ತನ್ನ ಹೆಮ್ಮೆಯಿಂದ ಎದ್ದು ಇದಿರುಗೊಳ್ಳದೆ ಅನಾದರವನ್ನು ಮಾಡಿದನು. ಆಗ ಆಚಾರ್ಯರು ಹಿಂದಿರುಗಿಬಿಟ್ಟರು. ಆಮೇಲೆ ಅವರನ್ನು ಪ್ರಸನ್ನರಾಗಿ ಮಾಡಿಕೊಳ್ಳಬೇಕೆಂದು ಇಂದ್ರನು ಅವರ ಮನೆಗೇ ಹೋದನು. ಅಲ್ಲಿ ಅವರು ಅವನಿಗೆ ಕಾಣಿಸಿಕೊಳ್ಳದೆ ಅಂತರ್ಧಾನರಾಗಿಬಿಟ್ಟರು. ಆಚಾರ್ಯರು ವಿಮುಖರಾದದ್ದನ್ನು ತಿಳಿದು ರಾಕ್ಷಸರು ದಂಡೆತ್ತಿ ಬಂದು ಅಮರಾವತಿಯಲ್ಲಿ ತಮ್ಮ ಧ್ವಜವನ್ನು ಊರಿಬಿಟ್ಟರು. ಆಮೇಲೆ ಇಂದ್ರನು ರಾಜ್ಯವನ್ನು ಕಳೆದುಕೊಂಡು ದಿಕ್ಕುದಿಕ್ಕುಗಳಲ್ಲೆಲ್ಲ ಅಲೆದಾಡಿ ಸೋತು ಸೊರಗಿ ಕೊನೆಗೆ ಬ್ರಹ್ಮನು ಹೇಳಿದಂತೆ ವಿಶ್ವರೂಪನೆಂಬ ಬ್ರಾಹ್ಮಣನನ್ನು ಪುರೋಹಿತನನ್ನಾಗಿ ಮಾಡಿಕೊಂಡು ರಾಜ್ಯವನ್ನು ಪಡೆಯಬೇಕಾಯಿತು.

ಸಾಮಾನ್ಯವಾದ ಅನಾದರಕ್ಕೇ ಇಷ್ಟಾದ ಮೇಲೆ ಅನಾದರದ ವೇಗವು ಹೆಚ್ಚಾದರೆ ಹೇಳಬೇಕಾದ್ದೇನಿದೆ? ತ್ರಿಶಂಕುರಾಜನು ಸಶರೀರನಾಗಿ ಸ್ವರ್ಗಕ್ಕೆ ಹೋಗುವ ಯಜ್ಞವನ್ನು ಮಾಡಿಸಿರೆಂದು ವಸಿಷ್ಠರನ್ನು ಕರೆದನು. ಅದು ಸಾಧ್ಯವಲ್ಲವೆಂದು ಅವರು ತಿರಸ್ಕರಿಸಿದರು. ಆಮೇಲೆ ಅವನು ಅವರ ಮಕ್ಕಳನ್ನು ಹುರಿದುಂಬಿಸಿ ನೋಡಿದನು. ಅವರೂ ಒಲಿಯಲಿಲ್ಲ. ಆಗ ಅವನು ಗುರುವನ್ನೂ ಗುರುಪುತ್ರರನ್ನೂ

ಜರಿದು ಅವರ ಮೇಲೆ ಶತ್ರುತ್ವವನ್ನು ಸಾಧಿಸುತ್ತಿದ್ದ ವಿಶ್ವಾಮಿತ್ರರಿಗೆ ಶರಣು ಹೋಗಿ ಅವರಿಂದ ಆ ಯಜ್ಞವನ್ನು ಮಾಡಿಸಿಕೊಂಡನು. ಗುರುದ್ರೋಹದಿಂದ ಅವನಿಗೆ ಚಂಡಾಲತ್ವವು ಬಂತು. ಯಜ್ಞವು ಪೂರ್ತಿಯಾದರೂ ದೇವತೆಗಳು ತಮ್ಮ ಲೋಕಕ್ಕೆ ಬಂದ ತ್ರಿಶಂಕುವಿನಲ್ಲಿ ಚಂಡಾಲನ ಚಿಹ್ನೆಯನ್ನು ನೋಡಿ ಅವನನ್ನು ಅಲ್ಲಿಂದ ಕತ್ತು ಹಿಡಿದು ದಬ್ಬಿಬಿಟ್ಟರು. ಅಲ್ಲಿಂದ ತಲೆಕೆಳಗಾಗಿ ಬೀಳುತ್ತಿದ್ದ ಅವನನ್ನು ವಿಶ್ವಾಮಿತ್ರರು ತಮ್ಮ ತಪಃಪ್ರಭಾವದಿಂದ ಮಧ್ಯಮಾರ್ಗದಲ್ಲಿಯೇ ನಿಲ್ಲಿಸಿದರು. ಅದೇ ತ್ರಿಶಂಕುಸ್ವರ್ಗವೆಂದು ಹೆಸರಾಗಿದೆ. ಗುರುಗಳನ್ನು ಧಿಕ್ಕರಿಸಿದ ದೋಷದಿಂದ ತ್ರಿಶಂಕು ಈಗಲೂ ತಲೆಕೆಳಗಾಗಿ ಆಕಾಶದಲ್ಲಿ ನೇತಾಡುತ್ತಿರುವನೆಂದು ಪುರಾಣಗಳು ಹೇಳುತ್ತವೆ.

ಗುರುಭಕ್ತಿಯೆಂಬುವದು ಸಾಕ್ಷಾತ್ತಾದ ಗುರುಗಳಲ್ಲಿರುವದಂತು ಸರಿಯಷ್ಟೆ. ಗುರುಗಳ ಪರಂಪರೆಯಲ್ಲಿಯೂ ಕೂಡ ತೋರಿಸಿ ದ್ರೌಪದಿಯು ಗುರುಭಕ್ತಿಯೆಂಬ ಸುವರ್ಣಪುಷ್ಪಕ್ಕೆ ಪರಿಮಲವನ್ನು ತುಂಬಿದ್ದಾಳೆ. ಅಶ್ವತ್ಥಾಮನು ಕೌರವೇಶ್ವರನ ಮನಸ್ಸನ್ನು ಮೆಚ್ಚಿಸಬೇಕೆಂಬ ಗಡಿಬಿಡಿಯಲ್ಲಿ ದಿಕ್ಕುತೋರದೆ ಒಂದು ರಾತ್ರೆ ಎಳೆಯರಾದ ಪಾಂಡವಪುತ್ರರನ್ನೇ ಪಾಂಡವರೆಂದು ಭ್ರಮಿಸಿ ರುಂಡಗಳನ್ನು ಕತ್ತರಿಸಿಕೊಂಡು ಹೋದದ್ದು ಪಾಂಡವರಿಗೂ ಅವರ ಹೆಂಡತಿಯಾದ ದ್ರೌಪದಿಗೂ ಒಂದೇ ಬಗೆಯಾದ ಹೊಟ್ಟೆಯುರಿಯನ್ನುಂಟುಮಾಡಿರಬಹುದಷ್ಟೆ. ತನ್ನ ಒಡಲ ಬೇಗೆಯನ್ನು ತೀರಿಸಿಕೊಳ್ಳಬೇಕೆಂದು ಅರ್ಜುನನು ಅವನನ್ನು ಬೆನ್ನಟ್ಟಿ ಹೋಗಿ ಜುಟ್ಟನ್ನು ಹಿಡಿದು ಎಳೆದು ತಂದನು. ಇದು ದ್ರೌಪದಿಯ ಕಣ್ಣಿಗೆ ಬಿತ್ತು. ಅರ್ಜುನನು ತನ್ನ ಪೌರುಷದ ಉಬ್ಬಟೆಯಲ್ಲಿ ಗುರುಪುತ್ರನನ್ನು ಕಾಲ ಕಸವಾಗಿ ಎಳೆದಾಡುತ್ತಿದ್ದದ್ದು ಆಕೆಗೆ ಸಹಿಸಲಿಲ್ಲ. ಅವನು ತನ್ನ ಐವರು ಕಂದರನ್ನೂ ಕೊಂದಂಥ ಪರಮಪಾತಕಿಯಾಗಿದ್ದರೂ ಅವನ ತಂದೆಯಾದ ದ್ರೋಣಾಚಾರ್ಯರು ತನ್ನ ಪತಿಯ ಗುರುಗಳಾಗಿದ್ದ ಭಾವನೆಯು ಅವಳ ಮನಸ್ಸಿನಲ್ಲಿ ತಲೆ ಎತ್ತಿತು. ಗುರುಗಳು ಹೇಗೋ ಗುರುಪುತ್ರನನ್ನೂ ಬಹುಮಟ್ಟಿಗೆ ಹಾಗೆಯೇ ಬಹು

ಮಾನಿಸಬೇಕೆಂದು ಗುರುಪುತ್ರನ ತಲೆಯನ್ನು ಹೊಡೆಯದಂತೆ ಅರ್ಜುನನ ಮುಂದೆ ತಾನು ಅಡ್ಡಬಂದು ಸಮಾಧಾನವನ್ನು ಹೇಳಿದಳು. ಈ ಸಮಯದಲ್ಲಿ ಅರ್ಜುನನು ಗುರುಪುತ್ರನ ಶಿಖೆಯನ್ನು ಮಾತ್ರ ಕತ್ತರಿಸಿ ಅವನ ತಲೆಯಲ್ಲಿ ಆಜನ್ಮಸಿದ್ಧವಾಗಿದ್ದ ಮಣಿಯನ್ನು ತೆಗೆದುಕೊಂಡು ತನ್ನ ಕೋಪವನ್ನು ಶಾಂತಮಾಡಿಕೊಳ್ಳಬೇಕಾಯಿತು. ಗುರುಪರಂಪರೆಯ ಮೇಲೆಯೇ ಇಷ್ಟು ಭಕ್ತಿಯನ್ನಿಡಬೇಕಾಗಿರುವಾಗ ಸಾಕ್ಷಾದ್ಗುರುಗಳ ಮೇಲೆ ಇಡಬೇಕಾದ ಭಕ್ತಿಗೆ ಪರಿಮಿತಿಯುಂಟೆ? ಗುರುಗಳ ಮಹತ್ತ್ವಕ್ಕೂ ಪರಿಮಿತಿಯಿಲ್ಲ; ಅವರ ಮೇಲಿಡಬೇಕಾದ ಭಕ್ತಿಗೂ ಪರಿಮಿತಿಯಿಲ್ಲ.

> ''ಹರನಿಂದುರ್ವಿಗೆ ದೈವವೇ? ಕಿರಣಕಿಂದುಂ ಬಟ್ಟು ಸೊಂಪುಂಟೆ? ನೆ |
> ತ್ತರಿಗಿಂತುಂಟೆ ಹಿತರ್ಕಳುಂ? ಮಡದಿಯಿಂ ಬೇರಾಪ್ತರಿನ್ನಿರ್ಪರೇ? ||
> ಸರಿಯೇ ವಿದ್ಯಕೆ ಬಂಧು? ಮಾರನಿದಿರೊಳ್ಬಿಲ್ಲಾಳೆ? ಮೂಲೋಕದೊಳ್ |
> ಗುರುವಿಂದುನ್ನತಸೇವ್ಯನೇ? ಹರಹರಾ! ಶ್ರೀಚೆನ್ನಸೋಮೇಶ್ವರಾ!!
>
> —ಸೋಮೇಶ್ವರಶತಕ



# ದೇಶಾಭಿಮಾನ

ವಿದ್ಯಾಭ್ಯಾಸವನ್ನು ಮುಗಿಸಿ ಗುರುದಕ್ಷಿಣೆಯನ್ನು ಕೊಟ್ಟು ಗೃಹಸ್ಥನಾಗಿ ಪ್ರಪಂಚವ್ಯವಹಾರಕ್ಕೆ ಆರಂಭಿಸಿದ ಮೇಲೆ ಮನುಷ್ಯನು ಅನೇಕ ನೀತಿನಿಯಮಗಳನ್ನು ಸಾಧಿಸುವದರಲ್ಲಿ ತನ್ನ ಆತ್ಮಶಕ್ತಿಯನ್ನು ತೋರಿಸಬೇಕಾಗುವದಷ್ಟೆ. ಎಲ್ಲ ನೀತಿನಿಯಮಗಳಲ್ಲಿಯೂ— ಮಣಿಗಳಲ್ಲಿ ಸೂತ್ರವು ಹೇಗೋ ಹಾಗೆ— ಒಳಗೇ ತೂರಿಕೊಂಡಿರುವ ಒಂದು ನೀತಿನಿಯಮವನ್ನು ಈ ಪಾಠವು ಹೇಳುವದು. ಅದು ಯಾವದೆಂದರೆ ದೇಶಾಭಿಮಾನ. ಮನುಷ್ಯನಿಗೆ ಸ್ವಭಾವವಾಗಿ ಸ್ವಾಭಿಮಾನವೂ ಸ್ವಜನಾಭಿಮಾನವೂ ಹೇಗೋ ಅಷ್ಟಿಷ್ಟಾದರೂ ಇರುವದು. ಇದರ ತಿರುಳೇ ಸ್ವದೇಶಾಭಿಮಾನ. ತಾಯಿಯಲ್ಲಿಯೂ ತಂದೆಯಲ್ಲಿಯೂ ಗುರುವಿನಲ್ಲಿಯೂ ಭಗವದ್ಭಾವನೆಯನ್ನು ಮಾಡೆಂದು ಹೇಳಿದ ವೇದವೇ ದೇಶಾಭಿಮಾನವನ್ನೂ ಉಪದೇಶಿಸಿರುವದು. ಆ ಮಂತ್ರವು ಯಾವದೆಂದರೆ—

"ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋ ಭುವಃ"

—ಋಗ್ವೇದ ೧—೧೩—೯

ಅರ್ಥವೇನೆಂದರೆ— "ಸ್ವಭಾಷೆ, ಸ್ವಸಂಸ್ಕೃತಿ, ಸ್ವದೇಶ— ಈ ಮೂರರ ಮೇಲಿನ ಅಭಿಮಾನಪೂರ್ವಕವಾದ ಉಪಾಸನೆಯು ಕಲ್ಯಾಣಕಾರಕವು. ಪ್ರಪಂಚವ್ಯವಹಾರದಲ್ಲಿ ಕಾಲಿಟ್ಟ ಮನುಷ್ಯನು ಅದರಲ್ಲಿ ತನ್ನ ಶ್ರೇಯಸ್ಸನ್ನು ಪಡೆಯಬೇಕಾದರೆ ಮೇಲೆ ಹೇಳಿದ ಮೂರು ವಿಷಯಗಳ ಅಭಿಮಾನದಿಂದ ಕೂಡಿ ನಡೆಯಬೇಕು.

ಸ್ವಭಾಷೆಯ ಮತ್ತು ಸ್ವಸಂಸ್ಕೃತಿಯ ವಿಷಯವಾಗಿ **ಆತ್ಮಶಕ್ತಿಯ ತೇಜಸ್ಸೆಂ**ಬ ಪುಸ್ತಕದಲ್ಲಿ ನಾವು ಅಷ್ಟಿಷ್ಟು ಉಲ್ಲೇಖಿಸಿರುವೆವು. ಮನುಷ್ಯನು ಪರಭಾಷೆಯಲ್ಲಿ ಬೇಕಾದಷ್ಟು ಪಾಂಡಿತ್ಯವನ್ನು ಪಡೆಯಲಿಕ್ಕೆ ಅಡ್ಡಿಯಿಲ್ಲ. ಅಡ್ಡಿಯಿಲ್ಲವೆಂದಿಷ್ಟೇ ಅಲ್ಲ; ಅದನ್ನು ಪಡೆಯಲೇ ಬೇಕು. ಆದರೆ ಪರಭಾಷೆಯ ಒಲಪಿಗೆ ಮರುಳಾಗಿ

ತನ್ನ ಭಾಷೆಯನ್ನು ಕಡೆಗಾಣಬಾರದು. ಪರಭಾಷೆಯಲ್ಲಿ ಕಾಣುವ ಸೌಂದರ್ಯಗಳನ್ನು ಸ್ವಭಾಷೆಗೆ ತಂದುಕೊಂಡು ಸ್ವಭಾಷೆಯೇ ಸರ್ವಮನೋಹರವಾಗುವಂತೆ ಮಾಡುವದರ ಕಡೆಗೆ ಲಕ್ಷ್ಯವನ್ನಿಡುವದೇ ಜಾಣತನ. ಮನುಷ್ಯನಿಗೆ ತಾಯ ಮಾತು ಹೇಗೆ ಮನೋಹರವೊ ತಾಯ್ನುಡಿಯ ಮಾತೂ ಹಾಗೆಯೇ ಹೆಚ್ಚು ಪರಿಣಾಮಕಾರಿಯಾಗಿರುವದು. ತಾಯ ನುಡಿಯು ಕಿವಿಗೆ ಬಿದ್ದೊಡನೆ ಹೃದಯವು ಅರಳುವಂತೆ ತಾಯ್ನುಡಿಯ ನುಡಿಯು ಕೇಳಬಂದಾಗಲೂ ಉಲ್ಲಾಸವಾಗಿಯೇ ಆಗುವದು. ಆದ್ದರಿಂದಲೇ ದೇಶದ ಜನರ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನು ಮಾಡುವದಕ್ಕೆ ದೇಶಭಾಷೆಯಷ್ಟು ಉತ್ತಮವಾದ ಉಪಕರಣವು ಬೇರೆ ಯಾವದೂ ಇಲ್ಲ. ಆದ್ದರಿಂದ ಪ್ರತಿಯೊಬ್ಬನೂ ಸ್ವಭಾಷೆಯಲ್ಲಿ ಅಭಿಮಾನವನ್ನಿಟ್ಟು ಅದನ್ನು ಮುಂದಕ್ಕೆ ತರುವದಕ್ಕೆ ಸರ್ವಸಾಹಸವನ್ನೂ ಮಾಡಬೇಕು.

ಸ್ವಸಂಸ್ಕೃತಿಯು ಸ್ವಭಾಷೆಯ ಬೆನ್ನು ಹತ್ತಿಕೊಂಡೇ ಇರುವದು. ಯಾವ ಭಾಷೆಯನ್ನು ಪರಮೋತ್ಕೃಷ್ಟವೆಂದು ಮೋಹಿಸುವನೊ ಆ ಭಾಷೆಯ ಸಂಸ್ಕೃತಿಯನ್ನು ಅವನು ಪಡೆಯುವನು. ಭಾಷೆಯು ಸಂಸ್ಕೃತಿಯ ಮಂತ್ರಾಧಿದೇವತೆಯೆಂದು ತಿಳಿದವರು ಹೇಳುವರು. ಆದ್ದರಿಂದ ಸಂಸ್ಕೃತಿಯನ್ನು ಉಳಿಸಿಕೊಳ್ಳುವದಕ್ಕೆ ಸ್ವಭಾಷೆಯೊಂದು ಉತ್ತೇಜಕವಾಗುವದಷ್ಟೆ. ತನ್ನ ವಿವೇಕದಿಂದಲೂ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವದಕ್ಕೆ ಮನುಷ್ಯನು ಆದಷ್ಟು ಎಚ್ಚರವನ್ನು ವಹಿಸಬೇಕು. ತನ್ನ ಪೂರ್ವಜರ ಆಚಾರಗಳನ್ನೂ ಮತ್ತು ವಿಚಾರಗಳನ್ನೂ ಕಡೆಗಾಣುತ್ತ ಬಂದ ಹಾಗೆಲ್ಲ ಅವನಿಗೆ ತನ್ನ ಜನಾಂಗದ ಅಭಿಮಾನವು ಸಡಿಲವಾಗುವದು. ಇಷ್ಟಾದ ಮೇಲೆ ಅವನು ತನ್ನವರ ಉನ್ನತಿಗೆ ಸಾಧಕನಾಗುವದಕ್ಕೆ ಬದಲಾಗಿ 'ಕುಲಕ್ಕೆ ಮೃತ್ಯು ಕೊಡಲಿಯ ಕಾವು' ಎಂಬಂತೆ ತನ್ನವರನ್ನೂ ಪರಕೀಯರ ದಾಸರನ್ನಾಗಿ ಮಾಡುವದಕ್ಕೆ ತಾನು ಮುಂದಾಳಾಗುವನು. ಹೀಗೆ ಪರಸಂಸ್ಕೃತಿಗೆ ದತ್ತಕರಾದವರು ಹೆಚ್ಚುತ್ತ ಬಂದ ಹಾಗೆಲ್ಲ ಜನಾಂಗವು ನಿರ್ವೀರ್ಯವಾಗಿ ಕ್ಷಯರೋಗಗ್ರಸ್ತವಾದಂತೆ

ಕ್ರಮಕ್ರಮವಾಗಿ ನಾಶವನ್ನು ಪಡೆಯುವದು. ಈ ದುಷ್ಫಲ ವನ್ನು ತಪ್ಪಿಸಿಕೊಳ್ಳಬೇಕಾದರೆ ಸ್ವಸಂಸ್ಕೃತಿಯ ಅಭಿಮಾನವನ್ನು ಮರೆಯಬಾರದು.

ಸ್ವಭಾಷೆಯ ಅಭಿಮಾನವೂ ಸ್ವಸಂಸ್ಕೃತಿಯ ಅಭಿಮಾನವೂ ಪುಷ್ಟಿಗೊಂಡಿದ್ದರೆ ಸ್ವದೇಶಾಭಿಮಾನವು ತನಗೆ ತಾನೇ ಪುಷ್ಟಿಗೊಂಡಿ ರುವದು. ಮತ್ತು ಸ್ವದೇಶಾಭಿಮಾನದ ಜಾಗರೂಕತೆಯುಂಟಾ ದಷ್ಟೂ ಸ್ವಭಾಷಾಭಿಮಾನವೂ ಸ್ವಸಂಸ್ಕೃತಿಯಭಿಮಾನವೂ ಚಿಗುರಿ ಕೊಳ್ಳುವವು. ಆದ್ದರಿಂದ ಇಲ್ಲಿ ಸ್ವದೇಶಾಭಿಮಾನದ ವಿಷಯದಲ್ಲಿ ಸ್ವಲ್ಪ ಬರೆಯಲಾಗುವದು.

ಸ್ವದೇಶಾಭಿಮಾನದ ಮಾತೆತ್ತುವ ಮೊದಲು ತಾಯ ಹೆಚ್ಚು ಗಾರಿಕೆಯನ್ನು ನೆನಪುಗೊಡಬೇಕಾಗಿದೆ. ಏಕೆಂದರೆ ತಾಯಿ ಮತ್ತು ಸ್ವದೇಶ—ಇವೆರಡೂ ಒಂದೇ ವರ್ಗಕ್ಕೆ ಸೇರಿದವುಗಳು.

"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ"

ಎಂಬ ವಾಕ್ಯವು ಜನಜನಿತವಾಗಿದೆ. ತಾಯಿಯೂ ಜನ್ಮಭೂ ಮಿಯೂ ಸ್ವರ್ಗಕ್ಕಿಂತ ಹೆಚ್ಚಿನವುಗಳು. ತಾಯ ತೊಡೆಯ ಮೇಲೆ ಇದ್ದಾಗ ಶಿಶುವಿನ ಮನಸ್ಸು ಯಾವ ಸ್ಥಿತಿಯಲ್ಲಿರುವದೆಂಬ ವಿಷಯ ದಲ್ಲಿ ನಮ್ಮ ಪರಮಾತ್ಮಸ್ತುತಿಯಲ್ಲಿರುವ ಶಿಶುವಿನ ಕಲ್ಪನೆಯೊಂದು ವ್ಯಕ್ತಗೊಳಿಸಿರುವದೇನೆಂದರೆ—

"ನಿನ್ನ ತೊಡೆಗಳನೇರಿ ಕುಳಿತಿ |
ರ್ದೆನ್ನ ಮನಮಿಾಲೋಕಮಂ ವಿಾ |
ರ್ದುನ್ನತದ ಲೋಕಗಳ ಮೇಲೇರ್ದಂತೆ ಭಾವಿಸಿ ಮೇಣ್ ||
ಇನ್ನು ಶಿವನ ಜಟಾಗ್ರದೆಡೆಯೊಳು |
ತಣ್ಣಗಿಹ ಚಂದ್ರಮನ ಬಿಂಬವು |
ಮೆನ್ನ ಕೈಗತಿಸುಲಭದಲಿ ಬಹುದೆನುತ ಯೋಚಿಸಿತು ||"

ಸ್ವದೇಶದ ದರ್ಶನದಿಂದಲೂ ಇದೇ ಅನುಭವವಾಗಲೇ ಬೇಕು. ದೊಡ್ಡನಗರದಲ್ಲಿ ಅನೇಕ ಬಗೆಯ ನೋಟಗಳನ್ನು ನೋಡುತ್ತ ಆನಂದದಿಂದ ಕಾಲವನ್ನು ಕಳೆಯುತ್ತಿದ್ದ ವಿದ್ಯಾರ್ಥಿಯು ಪಾಠ

ಶಾಲೆಯ ವಿರಾಮಕಾಲದಲ್ಲಿ ತನ್ನ ಜನ್ಮಭೂಮಿಗೆ ಹೋಗಬೇಕೆಂದರೆ ಅದು ಕುಗ್ರಾಮವಾದರೂ ಅವನಿಗೆ ಉಲ್ಲಾಸವಾಗುವದು. ದೂರಕ್ಕೆ ತನ್ನ ಊರ ನೋಟವು ಕಾಣುತ್ತಲೇ ಅವನೊಳಗೆ ಅವನಿಗರಿವಿಲ್ಲದೆ ಎಷ್ಟೋ ಪ್ರೇಮದ ಅಲೆಗಳು ಒಂದರ ಹಿಂದೊಂದು ಏರುವವು. ಇದು ಎಲ್ಲರಿಗೂ ಅನುಭವಸಿದ್ಧವಾದ ವಿಷಯ. ಸ್ವಾಮಿವಿವೇಕಾನಂದರು ಅಮೇರಿಕಾ, ಇಂಗ್ಲೆಂಡ್, ಜರ್ಮನಿ, ಜಪಾನ್ ಮುಂತಾದ ದೇಶಗಳನ್ನೆಲ್ಲ ಸುತ್ತಿಕೊಂಡು ಬರುವದಕ್ಕೆ ಹೋದರಷ್ಟೆ. ಆ ಎಲ್ಲ ದೇಶಗಳೂ ಭೌತಿಕಸಂಪತ್ತಿನಲ್ಲಿ ಒಂದಕ್ಕಿಂತೊಂದು ಮೆಟ್ಟಿಹಾರುವವುಗಳಾದ್ದರಿಂದ ಅವುಗಳ ವೈಭವವು ಅವರ ಕಣ್ಣಿಗೆ ಎಷ್ಟೋ ಹೊಸ ಹಬ್ಬವಾಗಿರಬಹುದು. ಇದರ ಮೇಲೆ ನಮ್ಮ ದೇಶದಲ್ಲಿ ಹೆಸರಿಗೆ ಬರದೆ ಎಲ್ಲಿಯೋ ಅಜ್ಞಾತವಾಸದಲ್ಲಿದ್ದ ಅವರಿಗೆ ಪರದೇಶಗಳಲ್ಲಿ ಅತ್ಯುತ್ಕೃಷ್ಟವಾದ ಆದರವು ದೊರೆಯುತ್ತಲೇ ಅವರ ಮೈ ಹಿಗ್ಗಿಹಿಸಿದು ಹೋಗಬಹುದಾಗಿತ್ತು. ಆದರೆ ಅವರು ತಮ್ಮ ಸಂಚಾರವನ್ನೆಲ್ಲ ಮುಗಿಸಿಕೊಂಡು ಹಿಂದಿರುಗಿ ಬಂದಾಗ ದೂರದಿಂದ ತಮ್ಮ ಜನ್ಮಭೂಮಿಯ ನೋಟವನ್ನು ನೋಡುತ್ತಲೆ ಯಾವ ಕಾರಣವೂ ಇಲ್ಲದೆ ಅವರ ಹೃದಯವು ಒಮ್ಮೆಗೇ ಪ್ರಫುಲ್ಲಿತವಾಗಿದೆ! ದೇಶಾಂತರಗಳನ್ನು ತಿರುಗಿ ಬಂದವರ ಅನುಭವಗಳೆಲ್ಲ ಹೀಗೆಯೇ ಇವೆ. ಸ್ವದೇಶದ ನೋಟವು ಕಾಣುವ ತನಕ ಏಕೆ? ಸ್ವದೇಶದ ನೆನಪಾದಾಗಲೆಲ್ಲ ಯಾರಿಗೂ ಮನೋವಿಕಾಸವಾಗದೆ ಇರುವದೇ ಇಲ್ಲ.

ಹೀಗಾಗುವದಕ್ಕೆ ಕಾರಣವೇನೆಂದರೆ ಜನ್ಮಭೂಮಿಯು ನಿಜವಾಗಿ ನಮ್ಮ ತಾಯಿಯೆ. ಆಕೆಯು ನಮ್ಮನ್ನು ಒಂಬತ್ತು ತಿಂಗಳು ಹೊತ್ತು ಹೆತ್ತವರಿಗೆ ಕೂಡ ತಾಯಿಯು. ನಮ್ಮ ತಂದೆತಾಯಿಗಳಿಗೆ ತಮ್ಮ ಶರೀರವನ್ನು ಪೋಷಿಸಿಕೊಳ್ಳುವದಕ್ಕೂ ತಮ್ಮ ಗರ್ಭಕ್ಕೆ ಬಂದ ನಮ್ಮ ಶರೀರವನ್ನು ಪೋಷಿಸುವದಕ್ಕೂ ಈ ಭೂಮಿಯಿಂದ ಬೆಳೆದ ಧಾನ್ಯಗಳೇ ಕಾರಣಗಳೆಂಬುದನ್ನು ಹೆಚ್ಚಾಗಿ ಹೇಳಬೇಕಾಗಿಲ್ಲ. ತಾಯಿಯು ಹೇಗೆ ಗರ್ಭದಲ್ಲಿರುವ ಶಿಶುವಿಗೆ ತನ್ನ ರಕ್ತಮಾಂಸಗಳ ಸಾರವನ್ನು ಕೊಟ್ಟು ರಕ್ಷಿಸುವಳೊ ಹಾಗೆ ಈ ಭೂಮಿ

ಯು ತನ್ನಲ್ಲಿ ಜನ್ಮವನ್ನೆತ್ತಿದವರಿಗೆಲ್ಲ ತನ್ನ ಸಾರವನ್ನುಂಡು ಬೆಳೆದ ಧಾನ್ಯಗಳನ್ನು ಕೊಟ್ಟು ರಕ್ಷಿಸುವಳು. ಹಡೆದ ಮಾತೆಯು ಸ್ವಲ್ಪ ಕಾಲ ಮಾತ್ರ ನಮಗಾಗಿ ತನ್ನ ಪ್ರಾಯವನ್ನು ಕಳೆದುಕೊಳ್ಳುವಳು; ಭೂಮಾತೆಯು ನಮ್ಮ ರಕ್ಷಣೆಗಾಗಿ ನಿರಂತರವೂ ತನ್ನ ಹೊಗರನ್ನು ಕಳೆದುಕೊಂಡು ಬಗೆಬಗೆಯ ಬೆಳೆಗಳನ್ನು ಬೆಳೆಯುತ್ತಲೇ ಇರುವದು. ಆದ್ದರಿಂದ ಈ ದೃಷ್ಟಿಯಿಂದ ಭೂಮಾತೆಯು ಹಡೆದ ಮಾತೆಗಿಂತ ಹೆಚ್ಚಾಯಿತು. ಹಡೆದ ಮಾತೆಯನ್ನು ಗುರ್ತಿಸುವದಕ್ಕೆ ಸ್ಥೂಲ ದೃಷ್ಟಿಯೇ ಸಾಕು; ಭೂಮಾತೆಯನ್ನು ಗುರ್ತಿಸುವದಕ್ಕೆ ವಿಚಾರ ದೃಷ್ಟಿಯು ಬೇಕು. ಹಡೆದ ಮಾತೆಯನ್ನು ಮಾತ್ರವೇ ಮಾತೆಯೆನ್ನುವದು ಬರೀ ಬಾಲಕರಿಗೆ ಭೂಷಣ; ಭೂಮಾತೆಯನ್ನೂ ಮಾತೆಯೆಂದು ಭಾವಿಸುವದು ಪ್ರೌಢರಿಗೆಲ್ಲ ಭೂಷಣ.

ಈ ವಿಚಾರದೃಷ್ಟಿಯ ಪರೆಯನ್ನು ತೆಗೆಸಿಕೊಂಡು ನಿಟ್ಟಿಸಿದರೆ ಭೂಮಿಯು ಬೆಳೆಯುವ ಬೆಳೆಯೆಲ್ಲ ತನ್ನಲ್ಲಿ ಜನ್ಮವನ್ನೆತ್ತಿದವರ ಆಹಾರಕ್ಕಾಗಿಯೇ ಇರುವದೆಂದು ಸ್ಪಷ್ಟವಾಗುವದು. ಹೇಗೆಂದರೆ ತಾಯ ಮೊಲೆಯಲ್ಲಿ ಉಕ್ಕಿಬರುವ ಹಾಲಿಗೆ ತನ್ನ ಮಕ್ಕಳ ಆಹಾರದ ಉದ್ದೇಶವಲ್ಲದೆ ಬೆರೆ ಏನಿರುವದು? ಈ ಕಲ್ಪನೆಯು ಈಚೀಚೆಗೆ ನಮ್ಮ ತಲೆಯಲ್ಲಿ ಹುಟ್ಟಿದ್ದಲ್ಲ; ವೇದದಲ್ಲಿಯೇ ನೋಡಿ—

"ಸಾ ನೋ ಭೂಮಿರ್ವಿಸೃಜತಾಂ ಮಾತಾ ಪುತ್ರಾಯ ಮೇ ಪಯಃ"

—ಅ ೧೨—೧—೧೦

ಎಂದು ಪ್ರಾರ್ಥನೆ ಇದೆ. ಆ ಭೂಮಾತೆ ತನ್ನ ಮಗನಾದ ನನಗೆ ಹಾಲನ್ನು ಕೊಡಲೆಂದು ಅದರ ಅರ್ಥ.

ಮಕ್ಕಳ ಬೆಳೆವಳಿಗೆಗೆ ತಾಯ ಹಾಲಿನಷ್ಟು ಬೆಲೆಯುಳ್ಳದ್ದು ಬೇರೆ ಯಾವದೂ ಇಲ್ಲವೆಂದು ನಮ್ಮ ದೇಶದಲ್ಲಿ ಎಲ್ಲರಿಗೂ ಅನುಭವ ವಿದೆ. ಆಕಳ ಹಾಲು ಮೊದಲಾದವುಗಳು ಕೂಡ ತಾಯ ಹಾಲಿಗೆ ಸರಿಯಲ್ಲ. ಯಾವ ಶರೀರದ ರಕ್ತಮಾಂಸಗಳ ಸಾರದಿಂದ ಶಿಶುವಿನ ಶರೀರರಚನೆಯಾಗಿದೆಯೊ ಆ ಶರೀರದ ರಕ್ತಮಾಂಸಗಳ ಸಾರವೇ ಆಗಿ ಹೊರಬೀಳುವ ಹಾಲು ಆ ಶಿಶುವಿಗೆ ಸರ್ವವಿಧದಲ್ಲಿಯೂ ಪೋಷಕ

ವಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಜನರು ಅನನ್ಯಗತಿಕರಾಗಿ ಮಹರ್ಷಿಗಳಿಗೆ ಶರಣುಹೋದರು. ಮಹರ್ಷಿಗಳು ಪ್ರಪಂಚವ್ಯವಹಾರಕ್ಕೆ ದೂರರಾಗಿ ಕಾಡಿನಲ್ಲಿ ತಮ್ಮ ತಪಶ್ಚರ್ಯೆಯನ್ನು ನಡೆಸಿಕೊಂಡಿದ್ದರು. ಅವರಿಗೆ ಪ್ರತ್ಯಕ್ಷವಾಗಿ ರಾಜನ ಸಂಬಂಧವು ಅಷ್ಟೇನೂ ಇರಲಿಲ್ಲ. ಆದರೂ ಭೂಮಾತೆಗೆ ಒದಗಿರುವ ಸಂಕಟವನ್ನು ಕೇಳಿದ ಮೇಲೆ ಅವರು ಸುಮ್ಮನಿರುವದಕ್ಕಾಗಲಿಲ್ಲ; ತಮ್ಮ ತಪಃಪ್ರಭಾವದಿಂದ ವೇನನನ್ನು ಬೂದಿಮಾಡಿ ಅವನ ತೊಡೆಯಿಂದ ಪೃಥುವೆಂಬುವನನ್ನು ಹುಟ್ಟಿಸಿ ಅವನಿಗೆ ಪಟ್ಟವನ್ನು ಕಟ್ಟಿದರು. ಭೂಮಾತೆಗೆ ಸಂಕಟಕಾರಿಯಾದ ರಾಜನನ್ನು ನಿಗ್ರಹಮಾಡಿಯಾದರೂ ಪ್ರಜೆಗೆ ಹಿತಕಾರಿಯಾಗಬಲ್ಲ ರಾಜನನ್ನು ಪ್ರತಿಷ್ಠೆಗೊಳಿಸುವದಕ್ಕೆ ಕೂಡ ಪ್ರತಿಯೊಬ್ಬ ಪ್ರಜೆಗೂ ಅಧಿಕಾರವುಂಟೆಂದು ಇದರಿಂದ ಸಿದ್ಧವಾಗುತ್ತದೆ.

ಭೂಮಿಯನ್ನು ತಾಯಿಯಂತೆ ಭಾವಿಸುವದೂ ಆಕೆಯನ್ನು ಉಪಾಸನೆ ಮಾಡುವದೂ ನಮ್ಮ ದೇಶದ ಕಲ್ಪನೆಯಲ್ಲವೆಂದೂ ಇದು ಪಾಶ್ಚಾತ್ಯದೇಶದಿಂದ ಬಂದದ್ದೆಂದೂ ಕೆಲವರು ಅಭಿಪ್ರಾಯ ಪಡುವರು. ಭೂಮಿಯನ್ನು ತಾಯಿಯೆಂಬ ಕಲ್ಪನೆಗೆ ಮೇಲೆ ಶ್ರುತಿಯನ್ನೇ ಉದಾಹರಿಸಿರುವೆವಾದ್ದರಿಂದ ಅದರ ಮುಂದೆ ಇನ್ನು ಉಸಿರೆತ್ತುವದಕ್ಕೆ ಬರುವ ಹಾಗಿಲ್ಲ. ಆಕೆಯನ್ನು ಉಪಾಸನೆ ಮಾಡಬೇಕೆಂಬ ಮಾತು ಕೂಡ ವೇದದಲ್ಲಿ

“ಉಪಸರ್ಪ ಮಾತರಂ ಭೂಮಿಮೇತಾಂ”

ಅ ೧೮—೩—೪೯

ಎಂಬ ಮುಂತಾದ ವಾಕ್ಯಗಳಲ್ಲಿ ಸ್ಪಷ್ಟವಾಗಿದೆ. ಹೀಗಿದ್ದರೂ ಕೂಡ ಈ ಕಲ್ಪನೆಯೇ ಪರದೇಶದ್ದೆನ್ನುವಷ್ಟು ನಮ್ಮ ತಲೆ ಕೊಟ್ಟಿರುವದಕ್ಕೆ ಪರದೇಶದ ಪಿತ್ಥವು ಏರಿರುವದೇ ಕಾರಣ. ಅನೇಕದಿನಗಳಿಂದ ಈ ಕಲ್ಪನೆಯು ಮಾಸುತ್ತ ಮಾಸುತ್ತ ಕೊನೆಗೆ ನಮಗೆ ಹೀಗೆ ವಿಪರೀತರೂಪವಾಗಿ ತೋರುವದಕ್ಕೆ ಮೊದಲಾಗಿದೆ. ನಿಜಸ್ಥಿತಿಯನ್ನು ವಿಚಾರಮಾಡಿದರೆ ಭೂಮಾತೆಯ ವಿಷಯಕವಾದ ಕೃತಜ್ಞತೆಯ ವಿಚಾರದಲ್ಲಿ ನಮ್ಮ ದೇಶಕ್ಕೆ ಸರಿಜೋಡಿಯಾಗಬೇಕಾದರೆ ಪಶ್ಚಿಮದೇಶ

ಗಳಿಗೆ ಇನ್ನೂ ಕೋಟ್ಯಂತರ ವರ್ಷಗಳಾದರೂ ಸಾಧ್ಯವಾದೀತೋ ಇಲ್ಲವೋ ಸಂಶಯವೇ ಸರಿ. ಏಕೆಂದರೆ ಪಶ್ಚಿಮದೇಶೀಯರು ಭೂಮಿಯನ್ನು ತಾಯಿಯೆಂದೇನೋ ಭಾವಿಸುತ್ತಾರೆ; ಆದರೆ ಆ ಕಲ್ಪನೆಯನ್ನು ಭಗವತ್ಸ್ವರೂಪದವರೆಗೂ ಏರಿಸುವ ಚಳಕವು ಅವರಿಗೆ ಸಿಕ್ಕಿಲ್ಲ. ಭೌತಿಕಭಾಗ್ಯವೇ ತಮ್ಮ ಸರ್ವಸ್ವವೆಂದು ಅದರಲ್ಲಿಯೇ ತೇಲಿ ಮುಳುಗಿ ತೇಲುಗಣ್ಣ ಮೇಲುಗಣ್ಣಾಗಿರುವವರಿಗೆ— ಪಾಪ!— ಭಗವಂತನ ಕಲ್ಪನೆ ಹೇಗೆ ಬರಬೇಕು!!

ಭೂಮಾತೆಯನ್ನು ಉಪಾಸನೆ ಮಾಡಬೇಕೆಂಬುದು ಬರೀ ಉಪದೇಶದಲ್ಲಿ ಮುಗಿದಿಲ್ಲ; ಕೃತಿಯಲ್ಲಿಯೂ ಇಳಿದು ಬಂದಿರುವದುಂಟು. ಹಿಂದೆ ಗೋಕುಲದ ಜನರು ತಮ್ಮ ಸರ್ವಸೌಭಾಗ್ಯಕ್ಕೂ ಇಂದ್ರನೇ ಕಾರಣಕರ್ತನೆಂದು ತಿಳಿದು ಇಂದ್ರನನ್ನು ಉದ್ದೇಶಮಾಡಿ ಒಂದು ಹಬ್ಬವನ್ನು ಮಾಡುತ್ತಿದ್ದರು. ಇಂದ್ರನೂ ಒಬ್ಬ ದೇವತೆಯೇ ಸರಿ. ಆದರೆ ಪ್ರತ್ಯಕ್ಷವಾಗಿ ನಮ್ಮ ಸರ್ವೇಷ್ಟದಾಯಕಳಾಗಿರುವ ಭೂಮಾತೆಗೆ ಹಬ್ಬವನ್ನು ಮಾಡದೆ ಎಲ್ಲಿಯೋ ಇದ್ದಾನೆಂದು ಯಾರೋ ಹೇಳುವ ಇಂದ್ರನನ್ನು ಕುರಿತು ಹಬ್ಬವನ್ನು ಮಾಡುವದು ಸರಿಯಲ್ಲವೆಂದು ಶ್ರೀಕೃಷ್ಣನು ತನ್ನವರನ್ನೆಲ್ಲ ಎಚ್ಚರಗೊಳಿಸಿ ತಮ್ಮ ಭೂಮಾತೆಯ ಅಭಿವ್ಯಕ್ತಸ್ವರೂಪವಾದ ಗೋವರ್ಧನಪರ್ವತವನ್ನು ಕುರಿತು ಹಬ್ಬವನ್ನು ಮಾಡಿಸಿದ್ದಾನೆ. ಈ ಸಮಯದಲ್ಲಿ ಇಂದ್ರನೂ ತನಗಾದ ನಷ್ಟದಿಂದ ಸಿಟ್ಟಿಗೆದ್ದು ಗೋಕುಲದ ಮೇಲೆ ದಂಡೆತ್ತಿ ಬಂದು ಶ್ರೀಕೃಷ್ಣನಿಂದ ಸೋತು ಹೋಗಿದ್ದಾನೆ. ಕೊನೆಗೆ ಗೋವರ್ಧನದ ಉಪಾಸನೆಯೇ ಊರ್ಜಿತವಾಗಿ ನಿಂತಿದೆ. ಶ್ರೀಕೃಷ್ಣನು ಇಂದ್ರನಿಗಿಂತ ಭೂಮಾತೆಯ ಬೆಲೆ ಹೆಚ್ಚೆಂದು ಈ ಉದಾಹರಣೆಯಿಂದ ತೋರಿಸಿರುವಾಗ ನಮ್ಮ ದೇಶದಲ್ಲಿ ಭೂಮಾತೆಯ ಉಪಾಸನೆಯ ಪ್ರಾಶಸ್ತ್ಯವು ಮುಗಿಲು ಮುಟ್ಟಿರುವದೆಂಬುದಕ್ಕೆ ಬೇರೆ ಸಾಕ್ಷಿ ಏಕೆ ಬೇಕು?

ಒಬ್ಬನು ಮನುಷ್ಯಜನ್ಮದಲ್ಲಿದ್ದರೂ ರಕ್ತಸಂಬಂಧಿಗಳಾದ ಬರೀ ತನ್ನ ಹೆಂಡಿರುಮಕ್ಕಳ ಯೋಗಕ್ಷೇಮದ ಮೇಲೆ ಮನ

ಸ್ಸನ್ನು ಹಾಕಿರುವವನು ಪಶುಜನ್ಮದ ಸ್ಥಿತಿಯಲ್ಲಿಯೇ ಇರುವನೆಂದು ತಿಳಿಯಬೇಕು. ಎಂದು ಅವನು ತನ್ನ ಜನ್ಮಭೂಮಿಯನ್ನು ತಾಯಂತೆಯೂ ಭಗವತಿಯಂತೆಯೂ ಭಾವಿಸಿ ದೇಶೀಯರ ಯೋಗ ಕ್ಷೇಮದ ಭಾರವನ್ನೆಲ್ಲ ತನ್ನ ಹೆಗಲ ಮೇಲೆ ಹೊತ್ತುಕೊಳ್ಳು ತ್ತಾನೊ ಆಗ ಮಾತ್ರ ಅವನು ಮನುಷ್ಯಜನ್ಮಕ್ಕೆ ಯೋಗ್ಯವಾದ ವ್ಯವಹಾರದಲ್ಲಿರುವನೆಂದು ಭಾವಿಸುವದಕ್ಕೆ ತಕ್ಕವನಾಗುವನು. ಈ ಮೂಲಮಂತ್ರವನ್ನು ನೆನಪಿನಲ್ಲಿಟ್ಟುಕೊಂಡು ಪ್ರತಿಯೊಬ್ಬನೂ ತನ್ನ ದೇಶಾಭಿಮಾನವನ್ನು ಸರ್ವವಿಧದಿಂದಲೂ ಪುಷ್ಟಿಗೊಳಿಸಿಕೊಳ್ಳ ಬೇಕು.

ಈ ಸಂದರ್ಭದಲ್ಲಿ ವಿಜಯನಗರದ ಬುಕ್ಕರಾಜನ ಹೆಂಡತಿ ಯಾದ ಹೊನ್ನಮಾಂಬೆಯು ತನ್ನ ಗಂಡನಿಗೆ ಹೇಳಿರುವ ಕೆಲವು ಅಭಿಪ್ರಾಯಗಳು ಒಳ್ಳೆ ಉದ್ಬೋಧಕಗಳಾಗಿವೆ. ಅವೇನೆಂದರೆ—

ಕಂ || ವಾಲಿಯ ಭಂಡಾರಂ ನಿಧಿ
ವೋಲಿರ್ದೀ ದೇಶದಲ್ಲಿ ವಾಸಿಸುವವರೊಳ್ ||
ವಾಲಾಗ್ರದ ಮಾತ್ರಮುಮಿಾ |
ವೇಳೆಯೊಳಿರಬಾರದೇಕೆ ಭಾಗ್ಯಂ? ಜನರೊಳ್ ||
ಜಯಲಕ್ಷ್ಮೀದೇವಿಯ ಜಗು |
ಲಿಯವೋಲ್ವಿಸ್ತಾರಮಾದ ನಿನ್ನೆದೆಯಾಗಳ್ ||
ಜಯಸೂಚಕವೋ ಮೇಣ್ನಿ |
ರ್ದಯಶತ್ರುಗಳಡಿಗೆ ಮೆಟ್ಟಲೋ? ನೀನದ ಪೇಳ್ ||

ಆ || ಭಾರತಭೂಮಿಯ ಬೆಳೆಯಿಂ |
ಭೂರಿಸುಪಕ್ವಾನ್ನಮುಂಡು ಬೆಳೆದಿರ್ಪ ||
ಭಾರದ ಸಾಲವ ತೀರಿಸೆ |
ಬಾರದ ಭೀರುಗಳಿಗೊಪ್ಪುವದೆ ದರ್ಪ? ||

—ಶ್ರೀವಿದ್ಯಾರಣ್ಯಕಾವ್ಯ



# ವಿದ್ಯಾಕಾಲಕ್ಷೇಪ

ಪ್ರಪಂಚವ್ಯವಹಾರನೆಂಬ ಪ್ರವಾಹದಲ್ಲಿ ಇಳಿದ ಮನುಷ್ಯನು ಹೇಗೆ ದೇಶಾಭಿಮಾನವನ್ನು ಜಾಗರೂಕವಾಗಿಟ್ಟುಕೊಳ್ಳಬೇಕೋ ಹಾಗೆಯೇ ತನ್ನ ವಿದ್ಯಾಕಾಲಕ್ಷೇಪವನ್ನು ಎಡೆಬಿಡದೆ ನಡೆಸುತ್ತಲೇ ಇರುವದರಲ್ಲಿಯೂ ಜಾಗರೂಕನಾಗಿರಬೇಕು. ವಿದ್ಯೆಯಿಲ್ಲದ ಮನುಷ್ಯನು ಕೊಂಬುಬಾಲಗಳಿಲ್ಲದ ಪಶುವಿಗೆ ಸಮಾನನೆಂದು ಅವನನ್ನು ಅಭಿಜ್ಞರಾದ ನೀತಿಶಾಸ್ತ್ರಕಾರರೆಲ್ಲರೂ ಜರಿಯುವರು. ಮನುಷ್ಯನು ಸಾಮಾನ್ಯವಾಗಿ ಬಾಲ್ಯದಲ್ಲಿ ಕೆಲವುಕಾಲವಿದ್ಯಾಭ್ಯಾಸದಲ್ಲಿಯೇ ತನ್ನಆಯುಷ್ಯವನ್ನು ಕಳೆಯುವನಷ್ಟೆ. ಆಗ ಕಲಿತ ವಿದ್ಯೆಯು ಚೆನ್ನಾಗಿ ಮನಸ್ಸಿನಲ್ಲಿ ಒಡಮೂಡಿರುವದಿಲ್ಲ. ಆ ಚಿಕ್ಕವಯಸ್ಸಿನಲ್ಲಿ ಮನುಷ್ಯನು ಗೆಳೆಯರನ್ನು ನೋಡಿಯೋ ಅಥವಾ ಹಿರಿಯರ ನಿರ್ಬಂಧದಿಂದಲೋ ಅಥವಾ ಅದರಿಂದ ಧನಾರ್ಜನೆಯಾಗುವದೆಂದೋ ಕಲಿಯುವನು. ಯಾವ ಉದ್ದೇಶವಾದರೇನು? ಕಲಿಯುವದರ ಕಡೆಗೆ ಮನಸ್ಸು ಒಲಿದರೆ ಸಾಕೆಂದು ಆಗ ಸುಮ್ಮನಿರಬೇಕೇ ಹೊರತು ಆ ಉದ್ದೇಶಗಳೊಂದೂ ಸರಿಯಲ್ಲ. ವಿದ್ಯೆಯ ಉದ್ದೇಶವು ಜ್ಞಾನ. ಈ ಉದ್ದೇಶವು ಚಿಕ್ಕವರ ಮನಸ್ಸಿಗೆ ಹಿಡಿಯುವದಿಲ್ಲ. ಆದ್ದರಿಂದ ಚಿಕ್ಕಂದಿನಲ್ಲಿ ಕಲಿತ ವಿದ್ಯೆಯು ಮುಂದೆ ರೂಢಿಸಿಕೊಳ್ಳುವ ನಿಜವಾದ ವಿದ್ಯೆಗೆ ತಳಹದಿಯೆಂದು ತಿಳಿಯಬೇಕೇ ಹೊರತು ವಿದ್ಯೆಯ ಕೆಲಸವೇ ಮುಗಿಯಿತೆಂದು ತಿಳಿಯಬಾರದು. ವಿದ್ಯೆಯೆಂಬುವದು ಶಿಶುವಿನ ದೃಷ್ಟಿಪ್ರಸಾರವಾಗುತ್ತ ಬರುತ್ತಲೇ ಆರಂಭವಾಗಿ ಇಂದ್ರಿಯಗಳೆಲ್ಲ ಮರಣೋನ್ಮುಖವಾಗುವವರೆಗೂ ನಡೆಯುವದು. ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ತನ್ನ ಜನ್ಮವಿರುವವರೆಗೂ ವಿದ್ಯಾಕಾಲಕ್ಷೇಪವನ್ನು ಮಾಡಬೇಕು.

ಪ್ರಾಣಿವರ್ಗದಲ್ಲೆಲ್ಲ ಓದುಬರಹಗಳ ಅಭ್ಯಾಸದಿಂದ ಆತ್ಮೋನ್ನತಿಯನ್ನು ಮಾಡಿಕೊಳ್ಳಬಲ್ಲವನು ಮನುಷ್ಯನೊಬ್ಬನೇ ಸರಿ.

ಓದುಬರಹಗಳ ಅಭ್ಯಾಸದಿಂದ ಮನುಷ್ಯನಲ್ಲಿರುವ ಪಶುತ್ವವು ದೂರವಾಗುವದಲ್ಲದೆ ಅವನಲ್ಲಿ ದೇವತ್ವವು ಕೂಡ ಎದ್ದು ಕಾಣುವದಕ್ಕೆ ಮೊದಲಾಗುವದು. ಆದ್ದರಿಂದ ವಿದ್ಯೆಯನ್ನೊಂದು ಚಟವಾಗಿ ಮಾಡಿಕೊಳ್ಳಬೇಕೆಂಬವರೆಗೂ ನೀತಿಶಾಸ್ತ್ರಜ್ಞರು ತಮ್ಮ ಉಪದೇಶವನ್ನು ಮುಂದುವರಿಸುತ್ತಾರೆ. ಚಟವೆಂದರೆ ಯಾವದಾದರೊಂದನ್ನು ಬಿಟ್ಟಿರಲಾರದಂತೆ ಆಗುವಿಕೆ. ಚಟವೆಂಬ ಶಬ್ದವು ಕೆಟ್ಟ ಕುಡಿತ, ಕೆಟ್ಟ ತಿನಿಸು— ಇವುಗಳ ಸಂಬಂಧವಾಗಿ ಹೆಚ್ಚು ಬಳಕೆಯಲ್ಲಿದೆ. ಮನುಷ್ಯನು ಹೇಗೆ ಅವುಗಳನ್ನು ಬಿಟ್ಟಿರಲಾರದಷ್ಟು ಅವುಗಳ ಚಟಕ್ಕೆ ಒಳಗಾಗುವನೊ ಹಾಗೆ ವಿದ್ಯಾಕಾಲಕ್ಷೇಪದ ಚಟಕ್ಕೆ ಒಳಗಾಗಬೇಕು. ಕೆಟ್ಟ ಕುಡಿತ ಮೊದಲಾದವು ಕೆಟ್ಟ ಚಟಗಳು. ವಿದ್ಯಾಕಾಲಕ್ಷೇಪವು ಒಳ್ಳೆಯ ಚಟ. ಚಟಗಳೆಂಬುವೆಲ್ಲ ಮನುಷ್ಯನು ಅಭ್ಯಾಸದಿಂದ ಮಾಡಿಕೊಂಡವುಗಳು. ಆದ್ದರಿಂದ ವಿದ್ಯಾಕಾಲಕ್ಷೇಪವನ್ನು ಚಟವಾಗಿ ಮಾಡಿಕೊಳ್ಳುವದೂ ಮನುಷ್ಯನಿಗೆ ಸಾಧ್ಯ. ಆದರೆ ಕೆಟ್ಟ ಚಟಗಳ ಕಡೆಗೆ ಮನಸ್ಸು ಬಹು ಬೇಗ ಹರಿಯುತ್ತದೆ. ವಿದ್ಯಾಕಾಲಕ್ಷೇಪದಂಥ ಒಳ್ಳೆಯ ಚಟಕ್ಕೆ ವಿವೇಕಿಗಳು ಹೆಚ್ಚು ಪ್ರಯತ್ನವನ್ನು ಮಾಡಬೇಕು.

ವಿದ್ಯಾಭ್ಯಾಸದ ಮುಖ್ಯಧ್ಯೇಯವೇನೆಂಬುದನ್ನು ಸೂಚಿಸಿ ನೀತಿಶಾಸ್ತ್ರಕಾರರು ಬರೆದಿರುವದೇನೆಂದರೆ—

"ಜ್ಞಾನವಿದ್ಯಾವಿಹೀನಸ್ಯ ವಿದ್ಯಾಜಾಲಂ ನಿರರ್ಥಕಮ್ ।
ಕಣ್ಠಸೂತ್ರಂ ವಿನಾ ನಾರೀ ಅನೇಕಾಭರಣೈರ್ಯುತಾ ॥"

ತಾತ್ಪರ್ಯವೇನೆಂದರೆ— ಮಂಗಲಸೂತ್ರವಿಲ್ಲದೆ ಎಷ್ಟು ಆಭರಣಗಳನ್ನು ಹೇರಿಕೊಂಡರೂ ಸ್ತ್ರೀಗೆ ಹೇಗೆ ಶೋಭಿಸುವದಿಲ್ಲವೊ ಹಾಗೆ ಜ್ಞಾನವಿದ್ಯೆಯೊಂದಿಲ್ಲದೆ ಉಳಿದ ಎಷ್ಟು ವಿದ್ಯೆಗಳನ್ನು ಕಲಿತರೂ ಪ್ರಯೋಜನವಿಲ್ಲ. ವಿದ್ಯೆಯಲ್ಲಿ ಸಂಗೀತವಿದ್ಯೆ, ಸಾಹಿತ್ಯವಿದ್ಯೆ, ಜ್ಯೋತಿಷವಿದ್ಯೆ, ಶಿಲ್ಪವಿದ್ಯೆ, ಚಿತ್ರವಿದ್ಯೆ ಮೊದಲಾದ ಅನೇಕ ಬಗೆಗಳುಂಟು. ಇವುಗಳೆಲ್ಲ ವ್ಯವಹಾರದಲ್ಲಿ ಉಪಯೋಗಬೀಳತಕ್ಕವುಗಳು.

ವ್ಯವಹಾರದಲ್ಲಿ ಇವಕ್ಕೆಲ್ಲ ಸರಿಯಾದ ಬೆಲೆಯುಂಟು. ಈ ಎಲ್ಲವಿದ್ಯೆಗಳೂ ಬೇಕಾದವುಗಳೇ ಆದರೂ ಇವುಗಳ ಉಪಯೋಗವು ಬರೀ ವ್ಯವಹಾರ ಮಾತ್ರಕ್ಕಾದ್ದರಿಂದ ಶಾಸ್ತ್ರಜ್ಞರು ಇವುಗಳಿಗೆ ಬೆಲೆಯನ್ನು ಕೊಡದೆ ಜ್ಞಾನವಿದ್ಯೆಗೆ ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಜ್ಞಾನ ವಿದ್ಯೆಯೆಂದರೆ ಈ ಜಗತ್ತಿಗೆಲ್ಲ ಕಾರಣನಾದ ಪರಮೇಶ್ವರನ ಸ್ವರೂ ಪದ ವಿಚಾರ. ಇದರಿಂದಲೇ ಮನುಷ್ಯನು ತನ್ನ ಮನುಷ್ಯತ್ವವನ್ನು ಕೂಡ ದಾಟಿ ದೇವತ್ವವನ್ನು ಪಡೆಯುವನು. ಇದೇ ಅತೀಂದ್ರಿಯ ಜ್ಞಾನ. ಜಗತ್ತಿನಲ್ಲಿ ಈ ವಿದ್ಯೆಯನ್ನು ಸಾಧಿಸುವವರ ಸಂಖ್ಯೆಯು ಬಹು ಕಡಿಮೆ. ಏಕೆಂದರೆ ಈ ವಿದ್ಯೆಗೆ ವ್ಯವಹಾರದಲ್ಲಿ ಬೆಲೆ ಇಲ್ಲದ್ದರಿಂದ ಜನರ ಪ್ರವೃತ್ತಿಯು ಇತ್ತ ಕಡೆಗೆ ಹರಿಯುವದಿಲ್ಲ. ಜನರು ಉತ್ತರ ಕ್ಷಣದಲ್ಲಿಯೇ ಫಲವನ್ನು ಕಾಣುವ ಹಾಗೆ ಇರುವ ಸಾಧನಗಳನ್ನು ಮುಂದೆ ಬಿದ್ದು ಕೈಕೊಳ್ಳುವಂತೆ ಬಹು ಕಾಲದ ಮೇಲೆ ಫಲವು ದೊರೆಯಬಹುದೆಂಬ ಸಾಧನಗಳ ಕಡೆಗೆ ಒಲಿಯುವದಿಲ್ಲ. ಜ್ಞಾನ ವಿದ್ಯೆಯು ತಡವಾಗಿ ಫಲಿಸತಕ್ಕದ್ದು. ಆದಕಾರಣ ಅದರ ಕಡೆಗೆ ಕಣ್ಣು ಹಾಕುವವರಿಲ್ಲ. ಆದರೂ ಅದು ನಮ್ಮ ಧ್ಯೇಯವೆಂಬು ದಾದರೂ ನಮ್ಮ ಮನಸ್ಸಿನಲ್ಲಿ ನಾಟಿದ್ದರೆ ಎಷ್ಟೋ ಅನುಕೂಲ.

ಒಂದು ಪಕ್ಷ ಈ ಜ್ಞಾನವಿದ್ಯೆಯನ್ನು ಹಿಂದಕ್ಕೊತ್ತಿದರೂ ನಮ್ಮ ಪ್ರತಿದಿನದ ವ್ಯವಹಾರಕ್ಕೇ ಉಪಯೋಗ ಬೀಳುವಂಥ ಇತಿ ಹಾಸಪುರಾಣಾದಿಗಳ ಮತ್ತು ಅನೇಕ ಭೌತಿಕಶಾಸ್ತ್ರೀಯವಿಚಾರ ಗಳ ವಿದ್ಯಾಕಾಲಕ್ಷೇಪವನ್ನಾದರೂ ಮನುಷ್ಯನು ಇಟ್ಟುಕೊಳ್ಳದೆ ಇರಬಾರದು. ಅನೇಕ ಗ್ರಂಥಗಳ ವ್ಯಾಸಂಗವನ್ನಿಟ್ಟುಕೊಳ್ಳುವದ ರಿಂದ ಅನೇಕ ಮಹಾಮಹಾ ಪ್ರಾಜ್ಞರೊಡನೆ ವ್ಯವಹಾರವನ್ನಿಟ್ಟು ಕೊಂಡ ಫಲವು ನಮಗೆ ದೊರೆಯುವದು. ವಿಚಾರಪರರಾದಂಥ ಜನರು ತಮ್ಮ ಸದಸದ್ವಿವೇಕಬುದ್ಧಿಯನ್ನುಪಯೋಗಮಾಡಿ ಒಳ್ಳೆ ಬೆಲೆಯುಳ್ಳ ಮರ್ಮಗಳನ್ನೆಲ್ಲ ತಮ್ಮ ವಾಙ್ಮಯದಲ್ಲಿ ತುಂಬಿಟ್ಟಿ ರುವರು. ಆ ಗ್ರಂಥಗಳನ್ನು ಕೈಗೆ ತೆಗೆದುಕೊಳ್ಳುತ್ತಲೇ ಆ ಗ್ರಂಥ ಕಾರನ ಮೂರ್ತಿಯ ಕಲ್ಪನೆಯು ನಮ್ಮಮನಸ್ಸಿನಲ್ಲಿ ಉದ್ಭವಿಸುವದು.

ಗ್ರಂಥವನ್ನು ಬಿಚ್ಚುತ್ತಲೇ ಆ ಗ್ರಂಥಕಾರನು ಪ್ರಸನ್ನಮುಖ ಮುದ್ರೆಯಿಂದ ನಮಗೆ ಉಪದೇಶಕ್ಕಾರಂಭಿಸಿದಂತೆ ಭಾವನೆಯಾಗು ವದು. ಅದನ್ನು ಓದಿದ ಹಾಗೆಲ್ಲ ಆ ಗ್ರಂಥಕರ್ತನ ವೀರ್ಯವತ್ತರ ವಾದ ವಾಣಿಯು ನಮ್ಮನ್ನು ಹುರಿದುಂಬಿಸುವದು. ಅಷ್ಟೇ ಏಕೆ? ಅದರಲ್ಲಿ ನಮಗೆ ಮೆಚ್ಚಿಗೆಯುಂಟಾದಷ್ಟು ನಾವು ಆ ಗ್ರಂಥಕರ್ತನ ತಾದಾತ್ಮ್ಯವನ್ನು ಪಡೆದಿರುವೆವು. ಇದೇನು ಅಲ್ಪಲಾಭವೆ? ಯಾವ ಮಹಾಪುರುಷನ ಪಾದಧೂಲಿಯನ್ನು ನಾಡಿನವರೆಲ್ಲರೂ ಮಹಾ ಪ್ರಸಾದವೆಂದು ಮುಡಿಯಲ್ಲಿ ಮುಡಿದುಕೊಳ್ಳುವರೊ ಆ ಮಹಾ ಪುರುಷನ ತಾದಾತ್ಮ್ಯಕ್ಕೆ ಬೆಲೆಯುಂಟೆ? ಗ್ರಂಥವನ್ನು ಓದುವಾಗ ಸ್ವಲ್ಪ ಹೊತ್ತಾದರೂ ನಾವು ನಮ್ಮ ಕ್ಷುದ್ರಬುದ್ಧಿಗಳನ್ನೆಲ್ಲ ಮರೆತು ಉದಾತ್ತವಿಚಾರದ ಆ ಗ್ರಂಥಕರ್ತನನ್ನು ನಮ್ಮಲ್ಲಿ ಆವಾಹನೆ ಮಾಡಿ ಕೊಳ್ಳುತ್ತೇವಲ್ಲ! ಅವನ ಗ್ರಂಥದ ವಾಚನದಿಂದ ಸ್ವಲ್ಪ ಹೊತ್ತಾ ದರೂ ನಾವು ಮಹನೀಯರೇ ಆದೆವು. ಇದರಿಂದ ಮುಂದೆ ನಾವು ಅದನ್ನೆ ಬೆಳಿಸಿಕೊಂಡು ನಾವೂ ಅವನ ಪದವಿಯನ್ನೆ ಪಡೆಯಬಹುದು. ಇದೇ ಗ್ರಂಥವಾಚನದ ಉದ್ದೇಶವು.

ಶಿವಾಜಿಯ ಜೀವಿತದ ಮಹತ್ತ್ವಕ್ಕೆಲ್ಲ ಈ ಗ್ರಂಥವ್ಯಾಸಂಗವೇ ತಾಯಿಬೇರಾಗಿರುವದು. ಶಿವಾಜಿಯು ಭಾರತದ ಕಥೆಗಳನ್ನು ಕೇಳಿ ಕೇಳಿಯೇ ವೀರಾಗ್ರೇಸರನಾದನೆಂದು ಇತಿಹಾಸಜ್ಞರು ಗೊತ್ತು ಮಾಡಿರುವರು. ಅಷ್ಟು ದೂರದ ಮಾತೇಕೆ? ಇಂದು ನಾವು ಭೀಮಾರ್ಜುನರ ಶೌರ್ಯಪ್ರಸ್ತಾಪವನ್ನು ಸ್ವಲ್ಪ ಓದೋಣ. ಒಡ ನೆಯೇ ನಮ್ಮಲ್ಲಿ ವೀರಾವೇಶವು ಮೈಗೂಡುವದು; ನಿಸ್ಸತ್ತ್ವವಾಗಿ ರುವ ನಮ್ಮ ಶರೀರವು ನೂರಾರು ಆನೆಗಳ ಬಲವುಳ್ಳದ್ದಾಗುವದು; ನಿರುತ್ಸಾಹವಾಗಿರುವ ನಮ್ಮ ಮನಸ್ಸು ಬೆರಳ ತುದಿಯ ಮೇಲೆ ಈ ಜಗತ್ತನ್ನು ಕುಣಿಸುತ್ತೇನೆಂದು ಹಮ್ಮೈಸುವದು. ಇದೆಲ್ಲ ಏತರಿಂದ? ಆಗ ನಾವು ಭೀಮಾರ್ಜುನರೇ ಆಗಿರುವೆವು. ಅದೇ ಸ್ಥಿತಿ ಯನ್ನೇ ನಾವು ಎಡೆಬಿಡದೆ ನಮ್ಮ ಮನಸ್ಸಿಗೆ ಮೈಗೂಡಿಸಿದರೆ ನಾವೂ ಅಭಿನವಭೀಮಾರ್ಜುನರೇಕಾಗಬಾರದು? ಜಗತ್ತಿನಲ್ಲಿ ಭೀಮಾ

ಜ್ಜನರಂಥ ಸಂತತಿಯುಂಟಾಗುವದೆಲ್ಲ ಹೀಗೆಯೇ. ತಂದೆತಾಯಿ ಗಳು ಈ ಬಗೆಯ ಕಲ್ಪನೆಗಳಲ್ಲಿಯೇ ಮುಳುಗಿ ತೇಲುವವರಾಗಿ ತಮ್ಮ ಮಕ್ಕಳೆದುರಿಗೆ ಜೋಗುಳದ ಪದವನ್ನು ಮೊದಲು ಮಾಡಿ ಕೊಂಡು ಇದನ್ನೆ ಹಾಡುತ್ತ ಬಂದರೆ ನಮ್ಮ ಭರತಖಂಡಕ್ಕೆ ವೈಭವದ ಕಾಲವು ಮತ್ತೊಮ್ಮೆ ಹೇಗೆ ಬರದೆ ಇದ್ದೀತು! ತಮ್ಮ ಪ್ರತಿಭೆಯಿಂದ ಜಗತ್ತನ್ನೆಲ್ಲ ಬೆಳಗಿದಂಥ ಪ್ರಾಜ್ಞಶಿರೋಮಣಿಗಳು ಈಗ ನಮ್ಮೆದುರಿಗೆ ಸ್ಥೂಲದೇಹವನ್ನು ಧರಿಸಿ ಕಾಣಬರದಿದ್ದರೂ ಅವರು ಆ ತಮ್ಮ ಸ್ಥೂಲದೇಹವನ್ನು ತ್ಯಾಗಮಾಡುವದಕ್ಕೆ ಮುಂಚೆ ತಮ್ಮ ಜೀವಕಳೆಯ ಸರ್ವಸ್ವವನ್ನೂ ತಮ್ಮ ಗ್ರಂಥದಲ್ಲಿ ಆವಾಹನೆಮಾಡಿ ಅದರಲ್ಲಿಯೇ ತಾವು ಅಂತರ್ಭೂತರಾಗಿರುವರು. ಅವರು ಬದುಕಿದ್ದ ಕಾಲದಲ್ಲಿ ಅವರ ಅನೇಕ ಕಾರ್ಯಗಳ ಗಡಿಬಿಡಿಯಲ್ಲಿ ನಮಗೆ ಅವರ ಸಹವಾಸವು ದೊರೆಯುತ್ತಿತ್ತೊ ಇಲ್ಲವೊ ಎಂದು ಸಂಶಯಿಸಬಹುದಾದರೂ ಗ್ರಂಥಸ್ಥರಾಗಿರುವ ಅವರು ನಮಗೆಷ್ಟು ಮಾತ್ರವೂ ದೂರರಲ್ಲ. ನಮಗೆ ಅವಕಾಶವಾಗುವದೊಂದೇ ತಡ; ನಾವು ಆ ಕಡೆಗೆ ಕಣ್ಣು ಹಾಕಿ ನೋಡುವದೊಂದೇ ತಡ; ಒಮ್ಮೆ ಅವರನ್ನು ಸಂಬೋಧನೆ ಮಾಡುವದೊಂದೇ ತಡ; ಒಡನೆ ಅವರು ನಮ್ಮನ್ನು ಸಂತಯಿಸುವದಕ್ಕೆ ಮುಂದೆ ಬರುವರು. ಆದ್ದರಿಂದ ಈ ಸೌಕರ್ಯವನ್ನು ಕಳೆದುಕೊಳ್ಳದೆ ಪ್ರತಿಯೊಬ್ಬನೂ ಗ್ರಂಥವಾಚನದಿಂದ ತನ್ನ ಆತ್ಮೋನ್ನತಿಯನ್ನು ಮಾಡಿಕೊಳ್ಳುತ್ತಲೆ ಇರಬೇಕು.

ಶಾಲೆಯಲ್ಲಿ ಕಲಿತ ವಿದ್ಯೆಯು ಮುಂದೆ ಕಲಿಯುವ ನಿಜವಾದ ವಿದ್ಯೆಗೆ ತಳಹದಿಯೆಂಬದನ್ನು ಮರೆಯಬಾರದು. ಶಾಲೆಯಲ್ಲಿ ಕಲಿಯುವಾಗಲೂ ಮನುಷ್ಯನಿಗೆ ಹೊಸಹೊಸ ವಿಚಾರಗಳು ತಿಳಿಯುವದೇನೂ ಸುಳ್ಳಲ್ಲ. ಆದರೆ ಆಗ ಆ ವಿದ್ಯೆಯು ಪಕ್ವವಾಗಿ ಸುವಾಸನೆಯು ಹೊರಬೀಳುವ ಸಂಭವವು ಕಡಿಮೆ. ವಿದ್ಯೆಯು ಪಕ್ವವಾದ ಲಕ್ಷಣವೇನು? ವಿನಯ. ಶಾಲೆಯಲ್ಲಿ ಕಲಿಯುವಾಗ ವಿದ್ಯಾರ್ಥಿಗಳಿಗೆ ಅನೇಕ ಹೊಸ ಹೊಸ ವಿಚಾರಗಳು ನಾನು ಮುಂದು ತಾನು ಮುಂದೆಂದು ಅವರ ಹೃದಯದೊಳಕ್ಕೆ ತುಂಬಿಕೊಳ್ಳುತ್ತಿರುವಾಗ ತಾವೇ ಸಾಕ್ಷಾದ್ಬೃಹ

ಸ್ಮೃತಿಗಳೆಂಬ ದುರಭಿಮಾನಕ್ಕೆ ಅವಕಾಶವಿದ್ದಹಾಗೆ ತಾನು ತಿಳಿದಿರು ವದೆಲ್ಲ ಅತ್ಯಲ್ಪವೆಂಬ ವಿಷಯವು ತಲೇ ಎತ್ತುವ ಪರಿಸ್ಥಿತಿ ಇರುವದಿಲ್ಲ. ಸಾಮಾನ್ಯವಾಗಿ ವಿದ್ಯಾಭ್ಯಾಸದ ಪ್ರಥಮಾವಸ್ಥೆಯಲ್ಲೆಲ್ಲ ಹೀಗೆಯೆ. ಈ ಹೆಮ್ಮೆಯು ನಿರ್ಮೂಲವಾಗಬೇಕಾದರೆ ಮನುಷ್ಯನು ಶಾಲೆ ಯನ್ನು ಬಿಟ್ಟ ಮೇಲೆ ಸ್ವತಂತ್ರವಾಗಿ ಅನೇಕ ಪ್ರಸಿದ್ಧಗ್ರಂಥಗಳ ಪರಿಚಯವನ್ನು ಪಡೆಯುತ್ತ ಹೋಗಬೇಕು. ಒಂದಕ್ಕಿಂತ ಒಂದು ಉತ್ಕೃಷ್ಟವಾಗಿರುವ ಅಂಥ ಗ್ರಂಥಗಳ ಮಾಧುರ್ಯವೂ ಶಾಂತಿ ದಾಯಕವೂ ಆದ ವಿಚಾರಗಳು ಮೆಲ್ಲಮೆಲ್ಲಗೆ ಹೃದಯದ ಮೇಲೆ ಪರಿಣಾಮವಾಗುತ್ತ ಬಂದ ಹಾಗೆಲ್ಲ ಮನುಷ್ಯನ ಹೆಮ್ಮೆಯೆಂಬ ಪಿತ್ಥವು ಇಳಿಯುತ್ತ ಇಳಿಯುತ್ತ ಬರುವದು. ಆಗ ಮದ್ದಾನೆ ಯನ್ನು ಅನುಕರಿಸುತ್ತಿದ್ದ ಮದದ ರೂಪವಾದ ಜ್ವರವು ಕುಗ್ಗಿ ಮನುಷ್ಯನು ಸಮಧಾತುವಿನವನಾಗುವನು. ಬರೀ ಶಾಲೆಯ ವಿದ್ಯಾಭ್ಯಾಸವೆಷ್ಟೋ ಅಷ್ಟೇ ಆದರೆ ಅವನು ಬಹುಮಟ್ಟಿಗೆ ಯಾವಾಗಲೂ ಜ್ವರಬಾಧೆಯಿಂದ ಪೀಡಿತನಾಗಿಯೇ ಇದ್ದಂತೆ ಇರ ಬೇಕಾಗುತ್ತದೆ. ನಿತ್ಯಶಾಂತಿಗೆ ಸಾಧನವಾದ ವಿದ್ಯೆಯು ನಿತ್ಯ ದುಃಖಕ್ಕೆ ಸಾಧನವಾಗುವದೆಂದರೆ ಎಂಥ ಅನರ್ಥ! ಆದಕಾರಣ ಶಾಲೆಯಲ್ಲಿ ಕಲಿಯುವ ಕಾಲವು ಮುಗಿಯುತ್ತಲೇ ವಿದ್ಯಾಭ್ಯಾಸ ವ್ರತಕ್ಕೆ ಉದ್ಯಾಪನೆಯನ್ನು ಮಾಡಿ ಮುಗಿಸದೆ ಆಮೇಲೆ ತನ್ನ ಜೀವ ಮಾನಾವಧಿ ವಿದ್ಯಾಭ್ಯಾಸದಲ್ಲಿಯೇ ಇದ್ದು ಅದರ ಪೂರ್ಣಪ್ರಯೋಜನ ವನ್ನು ಮಾಡಿಕೊಳ್ಳಬೇಕು. "**ಸ್ವಾಧ್ಯಾಯಾನ್ನ ಪ್ರಮದಿತವ್ಯಂ**" ಎಂಬ ಮಾತಿನಿಂದ ವೇದವು ಕೂಡ ಇದೇ ಅರ್ಥವನ್ನು ಉಪದೇಶಿ ಸುತ್ತದೆ.

ವಿದ್ಯೆಯು ಮನುಷ್ಯನ ಐಶ್ವರ್ಯದ ಬೆಳೆವಳಿಗೆಗೆ ಸಹಾಯ ವಾಗುವದು; ಬಂದ ಆಪತ್ತುಗಳನ್ನೆಲ್ಲ ಕಷ್ಟವಿಲ್ಲದೆ ಪರಿಹಾರಮಾಡಿ ಕೊಳ್ಳುವದಕ್ಕೆ ನೆರವಾಗುವದು; ಜಗತ್ತಿನಲ್ಲಿ ತನ್ನನ್ನು ಚಿರಜೀವಿ ಯಾಗಿ ಮಾಡುವಂಥ ಸತ್ಕೀರ್ತಿಯನ್ನು ತಂದುಕೊಡುವದು; ಮನ ಸ್ಸಿನ ಕ್ಷುದ್ರಕಲ್ಪನೆಗಳನ್ನು ಬೇರುಕಿತ್ತೊಗೆಯುವದು; ಉದಾತ್ತ

ವಿಚಾರದ ಪ್ರಭಾವದಿಂದ ಗೌರವವನ್ನು ತರುವದು; ಎಷ್ಟು ಹೇಳುವ ದೇನು? ವಿದ್ಯೆಗೆ ಅಸಾಧ್ಯವಾದದ್ದು ಜಗತ್ತಿನಲ್ಲಿ ಯಾವದೂ ಇಲ್ಲ. ಇಂಥ ವಿದ್ಯೆಯನ್ನು ಇಷ್ಟೇ ಕಾಲ ಅಭ್ಯಾಸಮಾಡತಕ್ಕದ್ದೆಂಬುದು ಹೇಗೆ ಒಪ್ಪೀತು! ವಿದ್ಯೆಗೂ ಪಾರವಿಲ್ಲ; ಅದರಿಂದ ಪ್ರಾಪ್ತವಾಗು ವಂಥ ಸತ್ಪರಿಣಾಮಕ್ಕೂ ಪಾರವಿಲ್ಲ. ಆದ್ದರಿಂದಲೇ ಅದರ ಅಭ್ಯಾ ಸಕ್ಕೂ ಪಾರವಿಲ್ಲ.

ಜಗತ್ತಿನಲ್ಲಿ ವಿದ್ಯೆಗಿರುವ ಪೂಜ್ಯತೆಯು ಬೇರೆ ಯಾವಯಾವ ದಕ್ಕೂ ಇಲ್ಲ. ಸಾಧಾರಣವಾಗಿ ಹಣಗಾರರಿಗೆ ಹೆಚ್ಚು ಗೌರವ ವನ್ನು ತೋರಿಸುವ ರೂಢಿ ಉಂಟಷ್ಟೆ. ಬಂಧುಗಳಿಗೆ ತೋರಿಸುವ ಗೌರವವು ಅದಕ್ಕಿಂತ ಹೆಚ್ಚು. ವಯೋವೃದ್ಧರಾದವರನ್ನು ಕಂಡಾಗ ಹಣಗಾರರೂ ಬಂಧುಗಳೂ ಕೂಡ ಬಗ್ಗಿ ನಡೆಯುವರು. ಸತ್ಕರ್ಮ ವನ್ನು ಮಾಡುವವನನ್ನು ಇವರೆಲ್ಲರೂ ಬಹುಮಾನಿಸುವರು. ವಿದ್ಯಾ ವಂತನ ಮುಂದೆ ಈ ಯಾರಿಗೂ ಬೆಲೆ ಇಲ್ಲ. ವಿದ್ವಾಂಸನಾದ ಹುಡುಗನು ತನ್ನ ಪಿತೃವ್ಯರಿಗೆ ವಿದ್ಯೆಯನ್ನು ಹೇಳುವದಕ್ಕಾರಂಭಿಸಿ ಅವರನ್ನು 'ಎಲೆಮಕ್ಕಳಿರಾ,' ಎಂದು ಸಂಬೋಧಿಸಿರುವ ವಿಚಾರವು ಗುರುಗಳ ಮಹತ್ತ್ವದ ಪ್ರಕರಣದಲ್ಲಿ ಬಂದಿರುವದನ್ನು ಇಲ್ಲಿ ನೆನೆಸಿ ಕೊಳ್ಳಬೇಕು. ಬರೀ ತಲೆ ನರೆತ ವೃದ್ಧತ್ವಕ್ಕೇ ಮರ್ಯಾದೆ ಇಲ್ಲ. ಚಿಕ್ಕವನಾದರೂ ಅವನ ವಿದ್ಯಾಭ್ಯಾಸದ ವೃದ್ಧತ್ವಕ್ಕೆ ಮರ್ಯಾದೆ. ವಿದ್ಯೆಯ ಈ ಬಗೆಯ ಮಹತ್ತ್ವವನ್ನು ಮನುಧರ್ಮಶಾಸ್ತ್ರವು ಕೆಳಗಿನ ಶ್ಲೋಕದಲ್ಲಿ ಹೇಳುವದು—

"ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಂ ॥"

ಮನುಷ್ಯನು ಪ್ರಪಂಚವ್ಯವಹಾರದಲ್ಲಿ ಕಾಲಿಡುತ್ತಲೇ ಅವನ ಉದ್ಯಮವೆಲ್ಲ ಹಣವನ್ನು ಕೂಡಿಹಾಕುವದರ ಕಡೆಗೇ ಇರುವದೇ ಹೊರತು ವಿದ್ಯೆಯನ್ನು ಕೂಡಿಹಾಕುವದರ ಕಡೆಗೆ ಇರುವದು ಕಡಿಮೆ. ಏಕೆಂದರೆ ಹಣದ ಅಗತ್ಯವೂ ಉಪಯೋಗವೂ ಮನುಷ್ಯನಿಗೆ ಹೆಜ್ಜೆ ಹೆಜ್ಜೆಗೂ ಇರುವದು. ವಿದ್ಯೆಯದು ಅಷ್ಟು ಎದ್ದು ಕಾಣಿಸಿಕೊಳ್ಳು

ವದಿಲ್ಲ. ಆದರೂ ಒರೆಗೆ ಹಚ್ಚಿ ನೋಡಿದರೆ ವಿದ್ಯೆಯೇ ಮೇಲುಗೈ ಯಾಗುವದು. ಹಣವು ಆರ್ಜನೆಯ ಕಾಲದಲ್ಲಿಯೂ ರಕ್ಷಣೆಯ ಕಾಲ ದಲ್ಲಿಯೂ ನಾಶಕಾಲದಲ್ಲಿಯೂ ದುಃಖವನ್ನು ಮುಂದು ಮಾಡಿ ಕೊಂಡೇ ಇರುವದು. ವಿದ್ಯೆಯು ಹಾಗಲ್ಲ; ಅದು ಯಾವಾಗಲೂ ಸುಖವನ್ನು ಮುಂದುಮಾಡಿಕೊಂಡಿರುವದು. ವ್ಯವಹಾರಕ್ಕೆ ಹಣದ ಅಗತ್ಯವು ಎಷ್ಟೋ ಇರುವದರಿಂದ ಮನುಷ್ಯನು ಹಣದ ಸಂಪಾ ದನೆಯನ್ನು ಬೇಕಾದಷ್ಟು ಮಾಡಲಿ; ವಿದ್ಯೆಯ ಸಂಪಾದನೆಯ ವಿಷ ಯದಲ್ಲಿ ಮಾತ್ರ ಎಷ್ಟು ಮಾತ್ರವೂ ಉಪೇಕ್ಷೆಯನ್ನು ಮಾಡ ಬಾರದು. ಒಬ್ಬ ನೀತಿಶಾಸ್ತ್ರಜ್ಞನು ಧನಕ್ಕಿಂತಲೂ ವಿದ್ಯೆಗೆ ಶ್ರೇಷ್ಠ ತ್ವವನ್ನು ತೋರಿಸಿರುವದೆಂತೆಂದರೆ—

"ಮುರಿದು ನರಾಧಿಪಂಗೆ ಕೊಳಬಾರದು; ಕಿಚ್ಚಿನೊಳೆಯ್ದೆ ಬೇಯದಿ |
ತ್ತರೆ ಮರಳ್ವುತ್ತರೋತ್ತರದಿ ಪೆರ್ಚುವದಕ್ಕರವಿದ್ಯೆ ನೀರೊಳಂ ||
ನೆರೆಯದು; ಗಾಳಿಯಿಂ ಕೆಡದು; ತಕ್ಕರಬಾಧೆಗಸಾಧ್ಯವಿಂತಿದಂ |
ಪಿರಿಯರು ನಿಚ್ಚಲೋದುವದು ಓದಲಿಹಕ್ಕೆ ಪರಕ್ಕೆ ಸಾಧನಂ ||"

ಸಾಮಾನ್ಯರಾದ ಧನಿಕರ ಮಾತೊಂದು ಕಡೆ ಇರಲಿ. ಮನು ಷ್ಯಾನಂದದ ಪರಮಾವಧಿಯನ್ನು ಅನುಭವಿಸುವ ಸಾರ್ವಭೌಮನ ವಿಷಯವನ್ನು ತೆಗೆದುಕೊಂಡರೂ ಕೂಡ ವಿದ್ವಾಂಸರಿಲ್ಲದಿದ್ದರೆ ಅವನ ಸಭೆಯು ಶೋಭಿಸುವದಿಲ್ಲ. ಆ ಸಾರ್ವಭೌಮನು ತನ್ನ ಅಧಿಕಾರ ಕ್ಕೊಳಪಟ್ಟ ಪ್ರದೇಶದಲ್ಲಿ ಮಾತ್ರ ತನ್ನ ಬೇಳೆಯನ್ನು ಬೇಯಿಸು ವನು. ವಿದ್ವಾಂಸನಿಗಾದರೋ ಇಂಥ ದೇಶವೆಂಬ ನಿಯಮವಿಲ್ಲ; ಇಡೀ ಜಗತ್ತೇ ಅವನದಾಗಿರುವದು. ಅವನ ಪೂಜ್ಯತೆಗೆ ಎಲ್ಲಿಗೆ ಹೋದರೂ ಕೊರತೆ ಇಲ್ಲ.

ಇಂಥ ವಿದ್ಯೆಯನ್ನು ಮನುಷ್ಯನು ತಾನು ಯಾವಾಗಲೂ ಕಲಿಯುತ್ತಿರುವದೊಂದೇ ಅಲ್ಲದೆ ಇತರರಿಗೆ ಕಲಿಸುತ್ತಲೂ ಇರುವ ದೊಂದು ಇನ್ನೂ ಹೆಚ್ಚಿನ ಮಾತು. ವಿದ್ಯೆಯು ಉತ್ಕೃಷ್ಟಫಲಕಾರಿ ಯಾದ ವಸ್ತುವಾದ ಮೇಲೆ ಅದು ನಮಗೆ ಹೇಗೆ ಬೇಕೊ ಎಲ್ಲರಿಗೂ

ಹಾಗೆಯೇ ಬೇಕಾದದ್ದು. ಅನೇಕರು ಹಸಿವಿನಿಂದ ಬಳಲುತ್ತಿರು ವಾಗ ನಾವು ಒಬ್ಬರೆ ಸವಿಯಾದ ಹಣ್ಣನ್ನು ಮೆಲ್ಲುತ್ತಿರುವದು ಯೋಗ್ಯವೆನಿಸೀತೊ? ಹಣ್ಣಿಗೆ ಬಾಯಿನೀರು ಕರೆದಂತೆ ವಿದ್ಯೆಗೆ ಇತ ರರು ಬಾಯಿನೀರು ಕರೆಯದೆ ಇರಬಹುದು. ಉದಾರಮನಸ್ಸಿನ ವನು ಒಂದು ಹೆಚ್ಚಿನ ಸುಖವನ್ನು ತಾನೊಬ್ಬನೆ ಎಂದಿಗೂ ಅನುಭವಿ ಸುವದಿಲ್ಲ. ಮನೆಯಲ್ಲಿ ಏನಾದರೊಂದು ಸಿಹಿಯಾದ ಅಡಿಗೆಯನ್ನು ಮಾಡಿದರೇನೆ ಅದನ್ನು ತಾನೊಬ್ಬನೇ ಉಣ್ಣಬಾರದೆಂದು ಇತರರಿಗೆ ಕೊಟ್ಟು ತಾನೂ ತಿನ್ನಬೇಕೆಂದು ನಮ್ಮ ಪದ್ಧತಿ. ಸರ್ವಾತಿಶಯ ವಾದ ಮಧುರತೆಯುಳ್ಳ ವಿದ್ಯೆಯನ್ನು ಇನ್ನೊಬ್ಬರಿಗೆ ಕೊಡದೆ ಇರುವದು ಹೇಗೆ ಶೋಭಿಸೀತು! ನಿಜವಾಗಿ ದಾನಗಳಲ್ಲೆಲ್ಲ ವಿದ್ಯಾ ದಾನಕ್ಕೆ ಸಮವಾದದ್ದಿನ್ನೊಂದಿಲ್ಲ. ಹಣವನ್ನು ಕೊಟ್ಟರೆ ಮನೆಗೆ ಹೋಗುವದರೊಳಗೇ ವೆಚ್ಚವಾಗಿಬಿಡಬಹುದು. ಅನ್ನವನ್ನಿಟ್ಟರೆ ಉಂಡು ಮಲಗಿ ಏಳುವದರಲ್ಲಿಯೇ ಅರಗಿಹೋಗಬಹುದು. ಉಳಿದ ದಾನಗಳೂ ಹೀಗೆಯೆ. ವಿದ್ಯೆಯ ದಾನದ ಪರಿಸ್ಥಿತಿ ಮಾತ್ರ ಬೇರೆ. ಅದು ಎಂದಿಗೂ ಕ್ಷಯವಾಗದೆ ತಾನು ಹೋದ ಕಡೆ ದಿನದಿನಕ್ಕೆ ಬೆಳೆಯುತ್ತಲೇ ಇರುವದು. ಮತ್ತು ವಿದ್ಯೆಯ ಉಪಯೋಗವು ಹಣದಂತೆ ಮತ್ತು ಅನ್ನದಂತೆ ಕ್ಷಣಿಕವಾಗಿರದೆ ಬಹುಕಾಲ ಬರತಕ್ಕ ದ್ದಾಗಿರುವದು. ಇದಕ್ಕೆ ಇಷ್ಟು ಹೆಚ್ಚಿನ ಬೆಲೆ ಇರುವದರಿಂದ ಇದರ ದಾನದ ಫಲದ ಬೆಲೆಯೂ ಅದಕ್ಕನುಗುಣವಾಗಿಯೇ ಇರು ವದು. ಆದ್ದರಿಂದ ಮನುಷ್ಯನು ತಾನೂ ಯಾವಾಗಲೂ ಕಲಿಯುವ ವನಾಗಿರಬೇಕಲ್ಲದೆ ಕಲಿಸುವವನೂ ಆಗಿರಬೇಕು.

ಈ ಸಂದರ್ಭದಲ್ಲಿ ನಾವು ಇನ್ನೊಂದು ಮಾತನ್ನು ನೆನಪಿನಲ್ಲಿಡ ಬೇಕು. ಪ್ರತಿಯೊಬ್ಬ ಮನುಷ್ಯನೂ ತೀರಿಸತಕ್ಕ ಋಷಿಋಣ ವೊಂದಿರುವದೆಂದು ನಮ್ಮ ಶಾಸ್ತ್ರಕಾರರು ಹೇಳುವರು. ಋಷಿಋಣ ವೆಂದರೆ ಋಷಿಗಳಿಗೆ ತೀರಿಸತಕ್ಕ ಸಾಲ. ಋಷಿಗಳೆಂದರ ತಮ್ಮ ಜೀವಿತಕಾಲವನ್ನೆಲ್ಲ ಭಗವಂತನ ಸ್ವರೂಪವನ್ನು ತಿಳಿಯುವದಕ್ಕೆ ವಿನಿಯೋಗಿಸಿ ಆ ಪ್ರಯತ್ನವಿಶೇಷದಲ್ಲಿ ಉದಾತ್ತವಿಚಾರಗಳನ್ನು

ಕಂಡುಹಿಡಿದವರು. ನಮ್ಮ ಪೂರ್ವಿಕರ ವಂಶವೃಕ್ಷವನ್ನು ಹಿಡಿದು ಕೊಂಡು ಹೋದರೆ ಪ್ರತಿಯೊಬ್ಬರ ಮೂಲಪುರುಷರೂ ಅಂಥ ಋಷಿ ಗಳಲ್ಲೊಬ್ಬರಾಗಿರುವರು. ಅವರು ಬಹು ಕಷ್ಟಪಟ್ಟು ತಿಳಿದ ಸಂಗತಿ ಗಳನ್ನೆಲ್ಲ ನಮಗೊಂದು ದೊಡ್ಡ ಆಸ್ತಿಯಾಗಿಟ್ಟಿರುವರು. ಅವು ಗಳಿಗೇ ವೇದವೆಂದು ಹೆಸರು. ಅವರು ನಮಗೆ ಕೊಟ್ಟಿರುವ ಈ ಮೂಲಧನವನ್ನು ಅವರಿಗೆ ನಾವು ತಿರುಗಿ ಮುಟ್ಟಿಸುವ ಬಗೆ ಹೇಗೆ? ಅವರ ವೇದವನ್ನು ಅವರಿಗೇ ಬಿಟ್ಟು ನಾವು ಕೈಮುಂದುರಿಕೊಂಡು ಕುಳಿತುಕೊಳ್ಳುವದು ಸರಿಯಲ್ಲ. ನಮ್ಮ ಪೂರ್ವಿಕರು ನಮಗೆ ವೇದವನ್ನು ಇದಕ್ಕಾಗಿ ಕೊಟ್ಟಿಲ್ಲ. ನಾವು ಆ ವೇದವನ್ನು ಓದಿದರೆ ಆ ಋಷಿಗಳು ತಮ್ಮ ಸಾಲವು ಮುಟ್ಟಿತೆಂದು ಭಾವಿಸುವರು. ವೇದ ರೂಪವಾದ ಸಾಲದ ತೀರುವಳಿಯ ಕ್ರಮವು ಹೀಗೆ. ಈಗ ಸಾಕ್ಷಾ ತ್ತಾಗಿ ವೇದವನ್ನು ಓದದಿದ್ದರೂ ಅದರ ಅರ್ಥವನ್ನೇ ವಿವರಿಸಿ ಹೇಳು ವಂಥ ಇತಿಹಾಸಪುರಾಣಗಳನ್ನು ಓದಿದರೂ ಆಗಬಹುದು. ಯಾವ ಮೂಲಕವಾಗಿಯಾದರೂ ಋಷಿಗಳ ಉದ್ದೇಶವನ್ನು ಪೂರ್ಣಮಾಡಿ ದರಾಯಿತು.

ಹಿಂದೆ ಜರತ್ಕಾರುವೆಂಬುವನು ತಾನು ಗೃಹಸ್ಥಾಶ್ರಮಕ್ಕೆ ಹೋದರೆ ತನ್ನ ವಿದ್ಯಾಭ್ಯಾಸಕ್ಕೆಲ್ಲ ಅಡಚಣೆಯೊದಗುವದೋ ಎಂಬ ಭೀತಿಯಿಂದ ಎಷ್ಟೋ ಕಾಲ ಬ್ರಹ್ಮಚರ್ಯೆಯಲ್ಲಿಯೇ ಇದ್ದು ಕೊನೆಗೆ ತನ್ನ ಅಧ್ಯಯನಕ್ಕೆ ಹೆಚ್ಚು ಸಹಾಯಕಳೇ ಆಗುವಂಥ ಕನ್ಯೆ ದೊರೆ ತಾಗ ವಿವಾಹವನ್ನು ಮಾಡಿಕೊಂಡಿರುತ್ತಾನೆ. ಹೀಗೆ ಮನುಷ್ಯನು ಪ್ರಾಪಂಚಿಕಸುಖಾನುಭವವನ್ನು ಮಾಡುವದಕ್ಕಿಂತಲೂ ವಿದ್ಯಾರ್ಜ ನೆಯ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಬೇಕು.

ಯಾಜ್ಞ್ಯವಲ್ಕ್ಯರು, ಉದ್ದಾಲಕರು, ಧೌಮ್ಯರು, ವಸಿಷ್ಠರು ಮೊದಲಾದವರೆಲ್ಲ ಭೌತಿಕಸುಖದ ಕಡೆಗೆ ವಿಶೇಷವಾಗಿ ಮನ ಸ್ಸನ್ನೇ ಹಾಕದೆ ತಾವು ಪಡೆದ ವಿದ್ಯಾಸಂಪತ್ತಿಗೆ ಸಾರ್ಥಕವಾಗಿ ತಮ್ಮಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಆಶ್ರಯವನ್ನು ಕೊಟ್ಟು

ಯಾವಾಗಲೂ ಇತರರಿಗೆ ವಿದ್ಯಾದಾನವನ್ನು ಮಾಡುತ್ತಲೇ ಇದ್ದ ಉದಾಹರಣೆಯು ನಾವು ಧ್ಯೇಯವಾಗಿಟ್ಟುಕೊಳ್ಳತಕ್ಕದ್ದಾಗಿದೆ.

ವಿದ್ಯಾಭ್ಯಾಸದ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡವರ ನಾಮಮಾಲೆಯಲ್ಲಿ ಶ್ರೀವಿದ್ಯಾರಣ್ಯರು ಅಗ್ರಗಣ್ಯರಾಗಿರುತ್ತಾರೆ. ನಮ್ಮ ಭರತಖಂಡದಲ್ಲಿ ಇವರಿಗೆ ತಿಳಿಯದ ಶಾಸ್ತ್ರವಿಲ್ಲವೆಂಬಷ್ಟು ಶ್ರೀವಿದ್ಯಾರಣ್ಯರು ತಮ್ಮ ಹೆಸರು ಅನ್ವರ್ಥನಾಮವೆನಿಸುವಂತೆ ಸರ್ವ ಶಾಸ್ತ್ರವನ್ನೂ ಕರತಲಾಮಲಕವಾಗಿ ಮಾಡಿಕೊಂಡಿದ್ದರು. ಅವರು ತಮ್ಮ ಗೃಹಸ್ಥಾಶ್ರಮಕಾಲದಲ್ಲಿ ವಿದ್ಯಾದಾನವನ್ನು ಮಾಡುತ್ತಿದ್ದ ವೈಭವವನ್ನು ನಮ್ಮ ವಿದ್ಯಾರಣ್ಯಕಾವ್ಯವು ವರ್ಣಿಸಿರುವದೆಂತೆಂದರೆ–

"ಒಂದೆಡೆ ಕಾವ್ಯವೊಂದೆಡೆಯಲಂಕೃತಿಯೊಂದೆಡೆ ವೇದಪಾಠಮಿ |
ನ್ನೊಂದೆಡೆ ತರ್ಕವೊಂದೆಡೆ ನಿರುಕ್ತಮುನೊಂದೆಡೆ ಸಾಂಖ್ಯಶಾಸ್ತ್ರಮಿ ||
ನ್ನೊಂದೆಡೆ ತಾಂ ದಶೋಪನಿಷದರ್ಥಮದೊಂದೆಡೆ ಸೂತ್ರಭಾಷ್ಯಮಿ |
ನ್ನೊಂದೆಡೆ ಪಾಣಿನೀಯಮೆನೆ ನರ್ತನಶಾಲೆಯದಾಯ್ತು ವಾಣಿಯಾ! ||"

ವಿದ್ಯಾರಣ್ಯರ ವಿದ್ಯಾಪ್ರಭಾವವು ಇಷ್ಟರಲ್ಲಿಯೂ ಮುಗಿಯಲಿಲ್ಲ. ಅವರು ಆಗ ಇದ್ದ ಹಲಕೆಲವರ ಕಿವಿಯೊಳಗೆ ಮಾತ್ರ ಊದಿ ತಾವು ಕೃತಾರ್ಥರೆಂದುಕೊಳ್ಳಲಿಲ್ಲ. ಆ ಕಾರ್ಯವನ್ನು ಮಾಡುವವರು ಬಹುಜನರಿರುವರು. ಅವರು ಈ ಸೃಷ್ಟಿ ಇರುವವರೆಗೆ ಹುಟ್ಟುವ ಸರ್ವಪ್ರಾಣಿಗಳಿಗೂ ತಮ್ಮ ಗ್ರಂಥಗಳ ಮೂಲಕವಾಗಿ ಉಪದೇಶವನ್ನು ಮಾಡುತ್ತಲೇ ಇರುವರು. ಇಂದು ನಾವು ವೇದಾರ್ಥವನ್ನು ತಿಳಿದುಕೊಳ್ಳಬೇಕಾದರೆ ಶ್ರೀವಿದ್ಯಾರಣ್ಯರ ಭಾಷ್ಯಕ್ಕೆ ಶರಣುಹೋದ ಹೊರತು ಗತ್ಯಂತರವೇ ಇಲ್ಲ. ಶ್ರೀವಿದ್ಯಾರಣ್ಯರ ಲೇಖನಿಯು ಸ್ಪರ್ಶನ ಮಾಡದೆ ಇರುವಂಥ ಶಾಸ್ತ್ರಭೂಮಿಯೇ ಇಲ್ಲ. ಅವರು ಶಾಸ್ತ್ರದ ಕಗ್ಗಂಟುಗಳನ್ನೆಲ್ಲ ಬಿಚ್ಚಿಬಿಚ್ಚಿ ನಮ್ಮೆದುರಿಗೆ ಇಟ್ಟಿರುವರಲ್ಲದೆ ಅದರ ಒಗಟುಗಳನ್ನೆಲ್ಲ ಒಡೆದು ರಹಸ್ಯಾರ್ಥಗಳನ್ನೆಲ್ಲ ಪ್ರಕಾಶಮಾಡಿರುವರು. ಅವರು ಈ ಉದ್ಯೋಗವನ್ನು ಮಾಡದೆ ಇದ್ದರೆ ಇಂದು ನಮಗೆ ಸರ್ವಶಾಸ್ತ್ರಗಳೂ ಕತ್ತಲೆಯ

ಮನೆಯಾಗಿರುತ್ತಿದ್ದವು. ಹೀಗೆ ಭವಿಷ್ಯಜ್ಜನಾಂಗಕ್ಕೆ ಕೂಡ ಉಪದೇಶಕರಾಗಿರುವದಕ್ಕೆ ತಮ್ಮ ಜೀವಿತಕಾಲವನ್ನೆಲ್ಲ ಕಳೆದ ಶ್ರೀವಿದ್ಯಾರಣ್ಯರ ಆಚರಣೆಯು ಅತ್ಯಂತಸ್ತುತ್ಯವಾಗಿದೆ. ಈ ರೀತಿಯಾಗಿ ಉಪಯುಕ್ತವಾದ ಗ್ರಂಥಗಳ ಬೆಳೆವಳಿಗೆಗೆ ತಮ್ಮ ಸರ್ವಸಾಹಸವನ್ನೂ ಧಾರೆಯೆರೆಯುವದು ಅವರ ವಿದ್ಯಾಪ್ರೇಮವನ್ನು ವ್ಯಕ್ತಮಾಡುತ್ತದೆ. ಹೀಗೆ ವಿದ್ಯಾವಿಷಯಕವಾದ ಪ್ರೇಮವು ಅದರ ಪರಾಕಾಷ್ಠಸ್ಥಿತಿಯನ್ನು ಮುಟ್ಟುವಂತೆ ಮಾಡಿಕೊಳ್ಳುವದಕ್ಕೆ ಪ್ರತಿಯೊಬ್ಬನೂ ಆದಷ್ಟು ಹೆಣಗಬೇಕು.

"ಪಾರಮಿರ್ಪ ಜಲರೂಪಸಿಂಧುವಂ |<br>
ಪೀರಿದಾತನ ಮಹತ್ತ್ವಮೇನೊ ಪೇಳ್ ||<br>
ಪಾರಮಿಲ್ಲದಿಹ ಶಾಸ್ತ್ರಸಿಂಧುವಂ |<br>
ಪೀರಿದೀತನ ಮಹತ್ತ್ವಮೇ ದಿಟಂ ||<br>
ಸತಿಯ ಗರ್ಭದಿ ಬಂದ ತನೂಜರಿಂ |<br>
ಪಿತನ ಚಿತ್ತಕೆ ತೋರದ ಸಂತಸಂ ||<br>
ಪ್ರಥಿತಪಂಡಿತರೆಂಬ ಪೊಗಳ್ಕೆಯಿಂ |<br>
ದತಿಯೆನಲ್ಕಿರೆ ತೋರ್ದುದಹರ್ನಿಶಂ ||"

—ಶ್ರೀವಿದ್ಯಾರಣ್ಯಕಾವ್ಯ



# ಒಡಹುಟ್ಟಿದವರ ಪ್ರೇಮ



ಮನುಷ್ಯನು ಪ್ರಪಂಚದ ವ್ಯವಹಾರದಲ್ಲಿ ಪ್ರವೇಶಿಸಿ ಕಣ್ಣು ಬಿಟ್ಟು ನೋಡುವಾಗ ತನ್ನ ಒಡಹುಟ್ಟಿದವರು ತನಗೆ ಅತ್ಯಂತಪ್ರೇಮ ಪಾತ್ರರಾಗಿ ಕಾಣುವದು ಸ್ವಭಾವವಾಗಿದೆ. ಇಬ್ಬರೂ ಒಂದೇ ಹೊಟ್ಟೆಯ ರಕ್ತಮಾಂಸಗಳನ್ನು ಭಾಗಿಸಿಕೊಂಡು ಬೆಳೆದವರಾಗಿರುವಾಗ ಪ್ರೇಮಾತಿಶಯವು ಅವರಿಬ್ಬರಲ್ಲಿ ತೋರದೆ ಮತ್ತೆಲ್ಲಿ ತೋರೀತು! ಈ ದೃಷ್ಟಿಯಿಂದ ಅವರಿಬ್ಬರನ್ನೂ ಬೇರೆಬೇರೆಯೆನ್ನುವದಕ್ಕಿಂತಲೂ ಒಂದೇ ಎನ್ನುವದೇ ಒಹುಮಟ್ಟಿಗೆ ಸಯುಕ್ತಿಕವಾಗುವದರಿಂದ ಅವರಿಬ್ಬರೂ ಪ್ರೇಮದಿಂದ ಒಂದಾಗಿರುವದು ಯೋಗ್ಯವಾಗಿಯೇ ಇದೆ. ವ್ಯವಹಾರದಲ್ಲಿ ಸುಗ್ಗಿ ಹತ್ತುದಿಕ್ಕುಗಳನ್ನೂ ನೋಡುವ ಮನುಷ್ಯನು ನಾನಾದೇಶಕ್ಕೆ ಹೋಗಿ ನಾನಾಜನರ ಪರಿಚಯವನ್ನು ಪಡೆದು ಎಲ್ಲರ ಸಂಬಂಧದ ವಿಶೇಷವನ್ನೂ ತನ್ನ ವಿಚಾರವೆಂಬ ತಕ್ಕಡಿಯಲ್ಲಿ ತೂಗಿ ನೋಡುತ್ತಾನೆ. ಒಂದೊಂದು ಕಡೆಯಲ್ಲಿ ಒಂದೊಂದು ಸಂದರ್ಭದಲ್ಲಿ ಒಬ್ಬೊಬ್ಬರ ಪ್ರೇಮದಲ್ಲಿ ಒಂದೊಂದು ಮಹತ್ತ್ವವು ಕಂಡರೂ ವಿಚಾರಪರನಾದವನಿಗೆ

> "ದೇಶೇ ದೇಶೇ ಕಲತ್ರಾಣಿ; ದೇಶೇ ದೇಶೇ ಚ ಬಾಂಧವಾಃ |
> ತಂ ತು ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ ||"

ಎಂಬ ಶ್ರೀಮದ್ರಾಮಾಯಣವಾಕ್ಯವು ಯಾವಾಗಲೂ ಮುಂದೆ ಬಂದು ನಿಲ್ಲುವದು. ಯಾವ ದೇಶಕ್ಕೆ ಹೋದರೂ ಅಲ್ಲಿ ಹೆಂಡತಿಯನ್ನು ಪಡೆಯಬಹುದು; ಯಾವ ದೇಶಕ್ಕೆ ಹೋದರೂ ಅಲ್ಲಿ ನಂಟರಿಷ್ಟರನ್ನು ಕಾಣಬಹುದು; ಒಡಹುಟ್ಟಿದ ಅಣ್ಣತಮ್ಮಂದಿರು ದೊರೆಯುವ ದೇಶವು ಮಾತ್ರ ಯಾವದೂ ಇಲ್ಲವೆಂದು ಅದರ ಅರ್ಥ.

ಲೋಕದಲ್ಲಿ ತನಗೆ ಪ್ರಿಯತಮವಾದ ವಸ್ತುವನ್ನು ಅಗಲಿರಬೇಕೆಂದರೆ ಯಾರು ಒಪ್ಪುತ್ತಾರೆ? ಒಡಹುಟ್ಟಿದವರ ಮನಸ್ಸು

ಸಹಜವಾಗಿಯೇ ಒಬ್ಬರನ್ನೊಬ್ಬರು ಅಗಲುವದಕ್ಕೆ ಎಂದಿಗೂ ಇಚ್ಛಿಸುವದಿಲ್ಲ. ಕಾರಣಾಂತರಗಳಿಂದ ಅಗಲಿಕೆಯುಂಟಾದರೆ ಆ ವಿಯೋಗವು ದುಃಖಕ್ಕೇ ಕಾರಣವಾಗುವದು. ಧರ್ಮರಾಯನು ಹುಟ್ಟಿ ಸಾಯುವವರೆಗೂ ಭೀಮಾರ್ಜುನರು ಮೊದಲಾದ ಒಡಹುಟ್ಟಿದವರೊಡನೆಯೇ ಇದ್ದುಕೊಂಡಿದ್ದನಷ್ಟೆ. ಅವನು ಸ್ವರ್ಗವನ್ನು ಕುರಿತು ಪ್ರಯಾಣಮಾಡಿದಾಗ ಭೀಮಾರ್ಜುನಾದಿಗಳು ಆ ದಾರಿಯಲ್ಲಿ ಮುಂದುವರಿಯಲಾರದೆ ದಾರಿಯಲ್ಲಿಯೇ ಸತ್ತುಹೋದರು. ಧರ್ಮರಾಯನೊಬ್ಬನು ತನ್ನ ನೈತಿಕನಿಷ್ಠೆಯ ಪ್ರಭಾವದಿಂದ ಒಬ್ಬ ಸ್ವರ್ಗೀಯಪುರುಷನನ್ನು ಮುಂದುಮಾಡಿಕೊಂಡು ಪರಲೋಕದ ದಾರಿಯಲ್ಲಿ ಸಾಗುತ್ತಿದ್ದನು. ಆಗ ದೂರದಿಂದ ಅನೇಕರ ಹಾಹಾರವಗಳು ಅವನಿಗೆ ಕೇಳಬಂದವು. ಸ್ವಭಾವವಾಗಿ ದಯಾಮಯನಾದ ಆ ಧರ್ಮರಾಯನು ಆ ದೀನಧ್ವನಿಯ ಬೆನ್ನು ಹಿಡಿದು ಹೋದಾಗ ಆ ಗೋಳುಗಳೆಲ್ಲ ನರಕದಲ್ಲಿ ಯಾತನೆಯನ್ನನುಭವಿಸುತ್ತಿರುವ ತನ್ನ ತಮ್ಮಂದಿರದಾಗಿತ್ತು. ಇದು ತಿಳಿಯುತ್ತಲೇ ಅವನ ಎದೆಯೇ ಇಬ್ಭಾಗವಾಗಿ ಹೋಯಿತು. ಆ ಸಮಯದಲ್ಲಿ ಸ್ವರ್ಗೀಯ ಪುರುಷನು ಧರ್ಮರಾಯನನ್ನು ಸ್ವರ್ಗಕ್ಕೆ ಹೊರಡಹೇಳಿ ತ್ವರೆಗೊಳಿಸಿದನು. ಆಗ ಧರ್ಮರಾಯನು ಹೇಳಿದ್ದೇನೆಂದರೆ—

"ಕಿಂ ಮೇ ಭ್ರಾತೃವಿಹೀನಸ್ಯ ಸ್ವರ್ಗೇಣ ಸುರಸತ್ತಮ |
ಯತ್ರ ತೇ ಮಮ ಸ ಸ್ವರ್ಗಃ; ನಾಯಂ ಸ್ವರ್ಗೋ ಮತೋ ಮಮ ||"

ಎಲೈ ಸ್ವರ್ಗೀಯ ಮಹಾನುಭಾವನೆ ತಮ್ಮಂದಿರನ್ನೆಲ್ಲ ಬಿಟ್ಟು ಸ್ವರ್ಗದಲ್ಲಿ ನನಗೇನು ಕೆಲಸ? ಅವರೆಲ್ಲಿರುವರೊ ಅದೇ ನನಗೆ ಸ್ವರ್ಗ. ಅವರಿಲ್ಲದಿರುವ ನಿನ್ನ ಸ್ವರ್ಗವು ನನಗೆ ಸ್ವರ್ಗವಲ್ಲ.

ಹೀಗೆ ಒಂದೇ ಗರ್ಭದಲ್ಲಿದ್ದವರು ಒಂದೇ ಕಡೆ ಒಕ್ಕಟ್ಟಾಗಿ ವ್ಯವಹಾರವನ್ನು ಮಾಡಿಕೊಂಡಿರುವದೇ ಹೆಚ್ಚು ಶೋಭಿಸುವದು. ಹೀಗೆ ಅಣ್ಣತಮ್ಮಂದಿರು ತಮ್ಮತಮ್ಮ ಹೆಂಡತಿಮಕ್ಕಳೊಡನೆ ಎಲ್ಲರೂ ಒಟ್ಟಾಗಿ ವ್ಯವಹಾರವನ್ನು ಮಾಡುತ್ತಿರುವದರಿಂದ ಅವರ ಪರಸ್ಪರ ಪ್ರೇಮವು ದಿನದಿನಕ್ಕೆ ಬೆಳೆಯುವದಕ್ಕೆ ಅವಕಾಶವಾಗುವದು.

ಕೂಡಿರುವಿಕೆಯೂ ಪ್ರೇಮದ ಬೆಳವಳಿಗೆಗೆ ಒಂದು ಮುಖ್ಯಸಾಧನವು. ನಮ್ಮ ರಕ್ತಸಂಬಂಧಿಗಳಲ್ಲದವರೊಡನೆಯಾದರೂ ನಾವು ಯಾರೊಡನೆ ಹೆಚ್ಚು ಕೂಡಿ ನಡೆಯುವೆವೊ ಅವರೊಡನೆ ನಮ್ಮ ಪ್ರೇಮವು ಬೆಳೆದಿರುವದು. ಕೇವಲ ರಕ್ತಸಂಬಂಧಿಗಳನ್ನಾದರೂ ನಾವು ಯಾರನ್ನು ಬಹುಕಾಲ ಅಗಲಿರುವೆವೊ ಅವರ ಮೇಲೆ ನಮ್ಮ ಪ್ರೇಮವು ನಮಗರಿವಿಲ್ಲದೆ ಇಳಿಮುಖವಾಗಿರುವದು. ಆದ್ದರಿಂದ ಒಡಹುಟ್ಟಿದವರೊಡನೆ ಒಕ್ಕಟ್ಟಾಗಿರುವದು ತಮ್ಮ ಸ್ವಭಾವವಾದ ಪ್ರೇಮಕ್ಕೆ ಪುಷ್ಟಿಕಾರಕವಾಗಿರುವದು.

ಅಣ್ಣತಮ್ಮಂದಿರು ತಮ್ಮತಮ್ಮ ಕರ್ತವ್ಯಗಳನ್ನು ಚೆನ್ನಾಗಿ ತಿಳಿದುಕೊಂಡು ಒಂದುಗೂಡಿರುವದರಿಂದ ಅವರ ಪರಸ್ಪರ ಮೆಚ್ಚುಗೆಯು ಎಷ್ಟು ಹೆಚ್ಚಾಗಿ ಬೆಳೆಯುವದೆಂಬಪಕ್ಕೆ ಲಕ್ಷ್ಮಣನ ಉದಾಹರಣೆಯು ಬಹಳ ಚೆನ್ನಾಗಿದೆ. ತಮ್ಮನಿಗೆ ಅಣ್ಣನ ವಿಷಯದಲ್ಲಿ ಪೂಜ್ಯಬುದ್ಧಿ ಇರುವದು ಸ್ವಾಭಾವಿಕವಷ್ಟೆ. ಲಕ್ಷ್ಮಣನಿಗೆ ಅಣ್ಣನ ಹೆಂಡತಿಯ ವಿಷಯಕವಾದ ಪೂಜ್ಯಬುದ್ಧಿಯು ಕೂಡ ಮುಗಿಲು ಮುಟ್ಟಿದೆ. ಅಣ್ಣನ ಹೆಂಡತಿಯನ್ನು ತಾಯಿಗೆ ಸಮಾನಳೆಂದು ಭಾವಿಸಬೇಕೆಂದು ಶಾಸ್ತ್ರವು ಹೇಳುತ್ತದೆ. ಈ ಅರ್ಥವನ್ನು ಕೃತಿಯಲ್ಲಿ ತರುವದು ಕಠಿನ. ಲಕ್ಷ್ಮಣನು ಈ ವ್ರತದಲ್ಲಿ ಚೆನ್ನಾಗಿ ಪಾರಾಗಿದ್ದಾನೆ. ರಾಮನೂ ಲಕ್ಷ್ಮಣನೂ ಸೀತಾದೇವಿಯನ್ನು ಹುಡುಕಿಕೊಂಡು ಹೊರಟರಷ್ಟೆ. ದಾರಿಯಲ್ಲಿ ಸುಗ್ರೀವನು ಋಷ್ಯಮೂಕಪರ್ವತದಲ್ಲಿ ರಾಮನ ಸ್ನೇಹವನ್ನು ಮಾಡಿಕೊಂಡು ಅಷ್ಟರೊಳಗೆ ಒಂದು ಸೀರೆಯ ಸೆರಗಿನಲ್ಲಿ ಕಟ್ಟಿದವುಗಳಾಗಿ ತನ್ನ ಬಳಿಗೆ ಆಕಾಶದಿಂದ ಬಂದು ಬಿದ್ದಿದ್ದ ಆಭರಣಗಳನ್ನು ತಂದು ಅವನ ಮುಂದಿಟ್ಟನು. ಅವುಗಳು ಸೀತಾದೇವಿಯವೇ ಇರಬಹುದೆಂದು ರಾಮನಿಗೆ ಸಂಶಯವಾಯಿತು. ತನ್ನ ತಮ್ಮನಿಗೆ ಅವುಗಳ ಗುರ್ತಿರಬಹುದೆಂದು ರಾಮನು ಅವುಗಳನ್ನು ಲಕ್ಷ್ಮಣನಿಗೆ ತೋರಿಸಿದನು. ಆಗ ಲಕ್ಷ್ಮಣನು ಆ ಗಂಟಿನಲ್ಲಿರುವ ಪಾದಾಭರಣಗಳು ಮಾತ್ರ ಸೀತಾದೇವಿಯವೆಂಬ ವಿಷಯಕ್ಕೆ ಸಂಶಯವಿಲ್ಲವೆಂತಲೂ ತಾನು

ಪ್ರತಿದಿನವೂ ಆಕೆಗೆ ವಂದಿಸುತ್ತಿದ್ದವನಾದ್ದರಿಂದ ಅವುಗಳ ಗುರ್ತು ತನಗೆ ಚೆನ್ನಾಗಿರುವದೆಂತಲೂ ಆಕೆಯ ಉಳಿದ ಅವಯುವಗಳ ಕಡೆಗೆ ತಾನು ಎಂದೂ ಕಣ್ಣು ಹಾಕಿಯೇ ಇಲ್ಲವಾದ್ದರಿಂದ ಆ ಆಭರಣಗಳ ಪರಿಚಯವು ತನಗಿಲ್ಲವೆಂದೂ ಹೇಳಿರುವನು. ಇದರಿಂದ ಅವನು ಸೀತಾದೇವಿಯ ವಿಷಯದಲ್ಲಿ ಎಷ್ಟು ಪೂಜ್ಯಬುದ್ಧಿಯಿಂದ ನಡೆದು ಕೊಳ್ಳುತ್ತಿದ್ದನೆಂಬುವದು ವ್ಯಕ್ತವಾಗುವದು. ಲಕ್ಷ್ಮಣನು ಈ ರೀತಿಯಲ್ಲಿ ತನ್ನ ಕರ್ತವ್ಯವನ್ನು ತಿಳಿದು ನಡೆದದ್ದರಿಂದಲೇ ಅವರ ಒಕ್ಕಟ್ಟಿಗೂ ಒಂದು ಹೊಳಪು ಬಂತು. ಆದ್ದರಿಂದ ಒಕ್ಕಟ್ಟಿಗೆ ಭೂಷಣವುಂಟಾಗಬೇಕಾದರೆ ಅಣ್ಣತಮ್ಮಂದಿರೂ ಮತ್ತು ಎಲ್ಲರೂ ತಮ್ಮತಮ್ಮ ಕರ್ತವ್ಯದಲ್ಲಿ ಜಾಗರೂಕರಾಗಿರಬೇಕು. ಹೀಗೆ ಕರ್ತವ್ಯ ಜಾಗರೂಕತೆಯುಳ್ಳವರಿಗೆ ಮಾತ್ರ ಒಕ್ಕಟ್ಟು ಮೈಗೂಡುವದೇ ಹೊರತು ಸ್ವಪ್ರತಿಷ್ಠೆಯವರಿಗೆ ಅದು ಒಗ್ಗುವದಿಲ್ಲ. ನಿಜವಾದ ಸಹೋದರಪ್ರೇಮವು ಕೂಡ ಕರ್ತವ್ಯನಿಷ್ಠನಲ್ಲಿ ಕಂಡುಬರುವದೇ ಹೊರತು ದುರಭಿಮಾನಿಯಲ್ಲಿ ತಲೆ ಎತ್ತುವದಿಲ್ಲ.

ಲಕ್ಷ್ಮಣನಲ್ಲಿ ಕರ್ತವ್ಯಜಾಗರೂಕತೆಯಿದ್ದದ್ದರಿಂದಲೇ ಅವನಲ್ಲಿ ನಿಜವಾದ ಸಹೋದರಪ್ರೇಮವು ಅಭಿವ್ಯಕ್ತವಾಗಿದೆ. ತಂದೆಯ ಬಾಯಿಂದ ಬಂದ ಮಾತನ್ನು ಸತ್ಯವಾಗಿ ಮಾಡುವದಕ್ಕಾಗಿ ರಾಮನು ವನವಾಸಕ್ಕೆ ಹೊರಟನಷ್ಟೆ. ಲಕ್ಷ್ಮಣನು ಅವನನ್ನು ಹಿಂಬಾಲಿಸ ಬೇಕಾದ ಅಗತ್ಯವೇನೂ ಇರಲಿಲ್ಲ. ಆದರೂ ಲಕ್ಷ್ಮಣನಿಗೆ ರಾಮ ನಲ್ಲಿದ್ದ ಸಹೋದರಪ್ರೇಮವು ರಾಮನನ್ನಗಲಿರುವದಕ್ಕೆ ಅವನನ್ನು ಇರಗೊಡಲಿಲ್ಲ. ತನ್ನ ತಮ್ಮನು ಅನವಶ್ಯಕವಾಗಿ ಹನ್ನೆರಡು ವರ್ಷ ದಷ್ಟು ದೀರ್ಘಕಾಲ ಕಷ್ಟಕ್ಕೆ ತಲೆಗೊಡಬೇಕಾಗುವದೆಂಬ ಕನಿಕರ ದಿಂದ ರಾಮನು ಲಕ್ಷ್ಮಣನನ್ನು ಅಯೋಧ್ಯೆಯಲ್ಲಿಯೇ ನಿಲ್ಲಿಸುವ ದಕ್ಕೆ ಎಷ್ಟೋ ಪ್ರಯತ್ನವನ್ನು ಮಾಡಿದನು. ಲಕ್ಷ್ಮಣನ ಏಕ ನಿಷ್ಠೆಯ ಮುಂದೆ ಅದೇನೂ ಸಾಗಲಿಲ್ಲ. ತಾನು ತಂದೆಯನ್ನಾಗಲಿ ತಮ್ಮನಾದ ಶತ್ರುಘ್ನನನ್ನಾಗಲಿ ತಾಯಿಯಾದ ಸುಮಿತ್ರೆಯನ್ನಾಗಲಿ ಅಗಲಿರಬಲ್ಲೆನೇ ಹೊರತು ಏಕದೇಹನ್ಯಾಯದಿಂದಿರುವ ಅಣ್ಣನಾದ

ನಿನ್ನನ್ನು ಬಿಟ್ಟಿರಲಾರೆನೆಂದೂ ಅಣ್ಣನ ಸಾನ್ನಿಧ್ಯವು ತನಗೆ ಸ್ವರ್ಗಕ್ಕಿಂತ ಹೆಚ್ಚೆಂದೂ ಹೇಳಿ ಕೊನೆಗೆ ಲಕ್ಷ್ಮಣನು ರಾಮನ ಹಿಂದೆ ಹೊರಟೇಬಿಟ್ಟನೇ ಹೊರತು ಹಿಂದೆ ನಿಲ್ಲಲಿಲ್ಲ.

ಧರ್ಮನೀತಿಗಳ ಮೇಲುಪಜ್ತಿಯನ್ನು ಜಗತ್ತಿಗೆ ತೋರಿಸಬೇಕೆಂದು ಭಗವಂತನೇ ಅವತಾರಮಾಡಿ ನಡೆಸಿದನೆಂಬ ರಾಮಾಯಣದಲ್ಲಿ ಭರತನ ಬಂಧುಪ್ರೇಮಕ್ಕೆ ಯಾವ ಬೆಲೆಯನ್ನು ಕಟ್ಟಬೇಕೋ ತಿಳಿಯುವದಿಲ್ಲ. ರಾಮನು ವನವಾಸಕ್ಕೆ ಹೊರಟಾಗ ಭರತನು ಊರಲ್ಲಿರಲಿಲ್ಲ. ಈಚೆಗೆ ಊರಿಗೆ ಬಂದ ಮೇಲೆ ತನ್ನನ್ನು ಪಟ್ಟಕ್ಕೆ ತರಬೇಕೆಂದು ತಾಯಿಯು ಮಾಡಿದ ಯುಕ್ತಿಯು ಅವನಿಗೆ ತಿಳಿಯಿತು. ಒಡನೆ ಅವನು ರಾಮನನ್ನೆ ಪಟ್ಟಕ್ಕೆ ಕರೆದುಕೊಂಡು ಬರಬೇಕೆಂದು ಹೊರಟನು. ವನವಾಸಸಂಬಂಧವಾದ ಕೈಕಯಿಯ ವರದಾನವು ಅರ್ಥವತ್ತಾಗುವದಕ್ಕಾಗಿ ಒಂದು ಪಕ್ಷ ರಾಮನಿಗೆ ಬದಲಾಗಿ ತಾನೇ ವನವಾಸವನ್ನು ಮಾಡುವದಕ್ಕೂ ಅವನು ಸಿದ್ಧನಾದನು. ಆದರೆ ರಾಮನು ಈ ಎರಡು ಅಭಿಪ್ರಾಯಗಳಿಗೂ ಒಪ್ಪಲಿಲ್ಲ. ತಂದೆಯ ಮಾತಿನ ಪ್ರತ್ಯಕ್ಷರವನ್ನೂ ಪಾಲಿಸುವದು ಇಬ್ಬರಿಗೂ ಕರ್ತವ್ಯವೆಂದು ರಾಮನು ನ್ಯಾಯಸಮ್ಮತವಾಗಿ ತೋರಿಸಿದನು. ಇಷ್ಟೇ ಅಲ್ಲ. ಅದೇ ತನ್ನಾಜ್ಞೆಯೆಂದನು. ರಾಮನು ಲಕ್ಷ್ಮಣನಿಗೆ ವನವಾಸಕ್ಕೆ ಬರಬೇಡವೆಂದು ಹೇಳಿದಾಗ ಲಕ್ಷ್ಮಣನು ಆ ಮಾತಿಗೆ ಹೆಚ್ಚು ಬೆಲೆಯನ್ನು ಕೊಡದೆ ತನ್ನ ಉದ್ದೇಶವನ್ನೇ ಸಾಧಿಸಿಬಿಟ್ಟನಷ್ಟೆ. ಪಟ್ಟಣಕ್ಕೆ ಹಿಂದಿರುಗಿ ರಾಜ್ಯಭಾರವನ್ನು ಸ್ವೀಕರಿಸೆಂದಾಗ ಭರತನು ಅದನ್ನು ಅಣ್ಣನ ಆಜ್ಞೆಯೆಂದು ತಲೆಯಲ್ಲಿ ಹೊರುವದಕ್ಕೆ ಸಿದ್ಧನಾದನು. ಆದರೂ ಅಣ್ಣನು ಕಾಡಿನಲ್ಲಿ ಕಷ್ಟಪಟ್ಟು ಅಲೆಯುತ್ತಿರುವಾಗ ತಾನು ಊರಲ್ಲಿ ರಾಜಭೋಗಗಳನ್ನು ಅನುಭವಿಸುವದು ಯೋಗ್ಯವಲ್ಲವೆಂದು ತನ್ನ ಅಣ್ಣನ ಪಾದುಕೆಗಳನ್ನು ತೆಗೆದುಕೊಂಡು ಹೋಗಿ ಸಿಂಹಾಸನದ ಮೇಲಿಟ್ಟು ರಾಜಭೋಗಗಳನ್ನೆಲ್ಲ ಅದಕ್ಕೆ ತೋರಿಸುತ್ತ ತಾನು ಕೇವಲ ಅದರ ಸೇವಕನಾಗಿ ಮುನಿವೃತ್ತಿಯಲ್ಲಿ ಕಾಲವನ್ನು ಕಳೆಯುತ್ತಿದ್ದನು. ರಾಮನು ನಿಯ

ಏತವಾದ ಕಾಲದಲ್ಲಿ ವನವಾಸದಿಂದ ಹಿಂದಿರುಗದೆ ಇದ್ದರೆ ಅವನ ಅಗಲಿಕೆಯ ದುಃಖದಿಂದ ಭರತನು ಅಗ್ನಿಪ್ರವೇಶವನ್ನು ಮಾಡು ವದಕ್ಕೆ ಕೂಡ ಸಿದ್ಧನಾಗಿದ್ದನೆಂದು ರಾಮಾಯಣವು ವರ್ಣಿಸುವದು.

ಅಣ್ಣನು ಕಷ್ಟದಲ್ಲಿದ್ದಾಗ ತಮ್ಮನು ಸುಖಪಡುತ್ತಿರಬಾರ ದೆಂದು ಭರತನು ಹಾಗೆ ಮಾಡಿದನಷ್ಟೆ. ಅದನ್ನು ಅಣ್ಣನ ಮೇಲಿನ ಪೂಜ್ಯತೆಯ ದ್ಯೋತಕವೆಂದೂ ಹೇಳಬಹುದು. ಆದರೆ ರಾಮನು ಕೂಡ ತನ್ನ ವನವಾಸದಲ್ಲಿ ತಮ್ಮನ ಮೇಲಿನ ಪ್ರೇಮದ ಪ್ರಮಾಣ ವನ್ನು ತೋರಿಸಿದ್ದಾನೆ. ರಾವಣನ ವಧೆಯಾದ ಮೇಲೆ ವಿಭೀಷಣನು ರಾಮನನ್ನು ಕುರಿತು ಲಂಕಾಪ್ರವೇಶವನ್ನು ಮಾಡಿ ಮಂಗಲಸ್ನಾನ ವನ್ನು ನೆರವೇರಿಸಬೇಕೆಂದು ಎಷ್ಟೋ ಬಗೆಯಾಗಿ ಕೇಳಿಕೊಂಡನು. ನಂದಿಗ್ರಾಮದಲ್ಲಿ ಭರತನು ಮುನಿವೃತ್ತಿಯಲ್ಲಿ ದೇಹದಂಡನೆಯನ್ನು ಮಾಡುತ್ತ ತನ್ನ ಆಗಮನವನ್ನು ಪ್ರತಿಕ್ಷಣದಲ್ಲಿಯೂ ನಿರೀಕ್ಷಿಸು ತ್ತಿರುವಾಗ ತಾನು ಇಲ್ಲಿ ಪುರಪ್ರವೇಶವೈಭವವನ್ನು ಅನುಭವಿಸು ವದು ತನ್ನ ಮನಸ್ಸಿಗೆ ಒಡಂಬಡದೆಂದು ರಾಮನು ಹೇಳಿದನು. ರಾಮನಿಗೆ ಭರತನ ಮೇಲಿರುವದು ಪೂಜ್ಯತೆಯಲ್ಲ; ಬಂಧುಪ್ರೇಮ. ಭರತನಿಗೆ ರಾಮನ ಮೇಲೆ ಪೂಜ್ಯತೆಯೂ ಉಂಟು; ಆದರೆ ಬಂಧು ಪ್ರೇಮಕ್ಕೇ ಪ್ರಾಶಸ್ತ್ಯ.

ರಾಮಾಯಣದಲ್ಲಿ ವನವಾಸದ ನಿಯಮವಿದ್ದದ್ದು ರಾಮನಿ ಗೊಬ್ಬನಿಗೇ. ಲಕ್ಷ್ಮಣನನ್ನು ತನ್ನ ಹಿಂದೆ ಬರಬೇಡವೆಂದು ರಾಮನೇ ಹೇಳಿದನು. ಆದರೂ ಅವನಾಗಿ ಬಂದನು. ಏಕೆಂದರೆ ರಾಮನು ಲಕ್ಷ್ಮಣನೊಡನೆ ಯಾವಾಗಲೂ ಎಡೆಬಿಡದೆ ಕೂಡಿಕೊಂಡೇ ಇರು ತ್ತಿದ್ದವನಾಗಿದ್ದನು. ಆದ್ದರಿಂದ ಅವರ ಪ್ರೇಮದಲ್ಲಿ ಕವಲೊಡೆ ಯುವದಕ್ಕೆ ಮಾರ್ಗವೇ ಇರಲಿಲ್ಲ. ಇದಲ್ಲದೆ ನಿರಪರಾಧಿಯಾದ ರಾಮನಿಗೆ ಬಂದ ಕಷ್ಟಕ್ಕೆ ತಾನೂ ಭಾಗಿಯಾಗಬೇಕೆಂದು ಲಕ್ಷ್ಮಣ ನಿಗೆ ಉತ್ಸಾಹವುಂಟಾಯಿತು. ಪಾಂಡವರ ಕಥೆಯಲ್ಲಿ ಹಾಗಲ್ಲ. ಧರ್ಮರಾಯನು ಜೂಜಾಡಿ ಸೋತು ವನವಾಸವನ್ನು ತಾನಾಗಿ ತನ್ನ

ಮೇಲೆ ತಂದುಕೊಂಡನು. **'ಮಾಡಿದ್ದುಣ್ಣೋ ಮಹಾರಾಯ'** ಎಂಬಂತೆ ಧರ್ಮರಾಯನು ತನ್ನ ಕರ್ಮಫಲವನ್ನು ಅನುಭವಿಸುವದಕ್ಕೆ ತಾನು ಹೋಗಬೇಕಾಯಿತು. ಧರ್ಮರಾಯನು ತನ್ನ ಅಹಿತವನ್ನು ತಾನು ಮಾಡಿಕೊಂಡದ್ದರಲ್ಲಿಯೇ ತನ್ನ ಕರ್ಮವನ್ನು ಮುಗಿಸಲಿಲ್ಲ; ಜೂಜಿನಲ್ಲಿ ತನ್ನ ತಮ್ಮಂದಿರನ್ನೆಲ್ಲ ಒಡ್ಡಿ ಅವರ ಗಂಟಲಿಗೂ ಗಾಣವನ್ನು ಹಾಕಿದನು. ಒಬ್ಬನು ಮಾಡಿದ ತಪ್ಪಿಗೆ ಇನ್ನೊಬ್ಬರು ಫಲಾನುಭವವನ್ನು ಮಾಡುವದೆಂದರೆ ಮನುಷ್ಯನ ಮನಸ್ಸಿಗೆ ಸಾಮಾನ್ಯವಾಗಿ ಒಗ್ಗುವದಿಲ್ಲ. ಅಣ್ಣತಮ್ಮಂದಿರೆಂದರೆ ಸ್ವಲ್ಪ ಹೆಚ್ಚುಕಡಿಮೆ ಎಲ್ಲರೂ ಸಮಾನರು. ಅಣ್ಣನು ದೊಡ್ಡವನಾದ ಮಾತ್ರಕ್ಕೆ ತಮ್ಮಂದಿರನ್ನೆಲ್ಲ ಸೋಲುವದು ಯಾವ ನ್ಯಾಯ? ಆದರೂ ಅಣ್ಣನಾದ ಧರ್ಮರಾಯನು ಸೋತನೆಂದು ತಮ್ಮಂದಿರಾದ ಭೀಮಾರ್ಜುನ ನಕುಲಸಹದೇವರು **'ಪಾಲಿಗೆಬಂದದ್ದು ಪಂಚಾಮೃತ'** ವೆಂದು ಅನುಭವಿಸಿದರು.

ತನ್ನ ನಷ್ಟವನ್ನೆಣಿಸದೆ ಬಂಧುಪ್ರೇಮಕ್ಕೇ ಹೆಚ್ಚಿನ ಬೆಲೆಯನ್ನು ಕೊಟ್ಟ ಉದಾಹರಣೆಯು ಇತಿಹಾಸದಲ್ಲಿಯೂ ಇಲ್ಲದೆ ಇಲ್ಲ. ಶಿವಾಜಿಯನ್ನು ತಂಜಾವೂರಿನವರೆಗಿನ ಪ್ರಾಂತಕ್ಕೆಲ್ಲ ರಾಷ್ಟ್ರಾಧಿಪತಿಯೆಂದು ಬಿಜಾಪುರದ ಸುಲ್ತಾನನು ಒಪ್ಪಿಕೊಂಡನು. ಇದರಿಂದ ತಂಜಾವೂರಿನಲ್ಲಿ ಶಿವಾಜಿಯ ಅಣ್ಣತಮ್ಮಂದಿರ ಪಾಮೆಯವನಾಗಿದ್ದ ವೆಂಕೋಜಿಯು ಆಶ್ರಿತನೆಂದು ಹೇಳಿದಂತಾಯಿತು. ಇದನ್ನು ಮನಸ್ಸಿಗೆ ಹಚ್ಚಿಕೊಂಡು ಅವನು ಕೊರಗುವದಕ್ಕಾರಂಭಿಸಿದನು. ಈ ಸಂಗತಿಯು ತನಗೆ ತಿಳಿಯುತ್ತಲೇ ಶಿವಾಜಿಯು ಆ ಪ್ರಾಂತದ ಆಡಳಿತವನ್ನೆಲ್ಲ ಅವನಿಗೇ ಕೊಟ್ಟು ಅವನನ್ನು ಅಲ್ಲಿ ಸ್ವತಂತ್ರರಾಜನನ್ನಾಗಿ ಮಾಡಿದನು.

ದೊಡ್ಡರಾಜ್ಯವನ್ನು ಸಂಪಾದಿಸಿದ್ದ ಶಿವಾಜಿಯು ಯಾವದೋ ಒಂದು ಮೂಲೆಯಲ್ಲಿ ತಾನು ಗೆದ್ದ ಭಾಗವನ್ನು ಅದರ ಪೂರ್ವಾಧಿಕಾರಿಯಾಗಿದ್ದ ಬಂಧುವಿಗೇ ಬಿಟ್ಟುಕೊಟ್ಟದ್ದು ಬಹಳ ಹೆಚ್ಚೆನಿಸದಿರ

ಬಹುದು. ಮೇವಾಡದ ಚರಿತ್ರೆಯನ್ನು ತೆಗೆದುಕೊಂಡರೆ ಭ್ರಾತೃ ಪ್ರೇಮದ ಪರಮಾವಧಿಯು ತೋರುವದು. ರಾಣಾರಾಜಸಿಂಗ ನಿಗೆ ಸವತಿಪತ್ನಿಯರಿಬ್ಬರಲ್ಲಿ ಒಬ್ಬಳ ಹೊಟ್ಟೆಯಲ್ಲಿ ಭೀಮಸಿಂಗನೂ ಇನ್ನೊಬ್ಬಳ ಹೊಟ್ಟೆಯಲ್ಲಿ ಜಯಸಿಂಗನೂ ಹುಟ್ಟಿದರು. ಭೀಮ ಸಿಂಗನೇ ಹಿರಿಯನು. ನ್ಯಾಯದಿಂದ ಅವನೇ ರಾಜ್ಯಾಧಿಕಾರಿಯು. ಆದರೆ ರಾಜದಂಪತಿಗಳಿಗೆ ಜಯಸಿಂಗನ ಮೇಲೆ ಹೆಚ್ಚು ಪ್ರೇಮವು ಕಂಡುಬಂತು. ಮಕ್ಕಳಿಬ್ಬರೂ ದೊಡ್ಡವರಾದ ಮೇಲೆ ಭೀಮಸಿಂಗ ನಿಂದ ಜಯಸಿಂಗನಿಗೆ ಎಲ್ಲಿ ಉಪಹತಿಯೊದಗೀತೋ ಎಂದು ಹಿರಿಯರ ಮನಸ್ಸಿನಲ್ಲಿ ಒಂದು ಕುಕಲ್ಪನೆಯು ತಲೆ ಎತ್ತಿತು. ಆಗ ಭೀಮ ಸಿಂಗನು ತನ್ನ ತಮ್ಮನಿಗೇ ಸರ್ವೈಶ್ವರ್ಯವೂ ಇರಲೆಂದು ಹೇಳಿ ತಾನು ಆ ದೇಶವನ್ನೇ ಬಿಟ್ಟು ಹೊರಬಿದ್ದನು. ಮಾರ್ಗಾಯಾಸ ದಿಂದ ಒಂದು ಕಡೆ ನೀರು ಕುಡಿಯಬೇಕೆಂದು ಕುಳಿತಾಗ ಆಪ್ರಾಂತ ವು ಇನ್ನೂ ಜಯಸಿಂಗನಿಗೆ ತಾನು ಬಿಟ್ಟು ಕೊಟ್ಟ ಭಾಗದ್ದೇ ಎಂದು ನೆನಪಾಗುತ್ತಲೇ ನೀರನ್ನು ಕುಡಿಯದೆ ಹಾಗೆಯೇ ಮುಂದೆ ಸಾಗಿದನು.

ಅಣ್ಣತಮ್ಮಂದಿರು ಒಟ್ಟಿಗಿರುವದು, ಒಬ್ಬರ ಸುಖಕಷ್ಟಕ್ಕೊ ಬ್ಬರು ಭಾಗಿಯಾಗಿರುವದು, ಸ್ವಾರ್ಥವನ್ನೆ ಮುಖ್ಯವಾಗೆಣಿಸದೆ ಬಂಧು ಪ್ರೇಮವನ್ನೇ ದೊಡ್ಡದೆಂದು ಭಾವಿಸುವದು- ಇವೆಲ್ಲ ಒಡಹುಟ್ಟಿದವರ ಪ್ರೇಮದ ಸುಚಿಹ್ನಗಳೇ. ಆದರೂ ಆ ಪ್ರೇಮವೆಂಬ ಅರಮನೆಗೆ ಶಿಖರವನ್ನಿಡುವ ಸುಯೋಗವು ಲಕ್ಷ್ಮಣನ ಪಾಲಿಗೇ ಬಂದಿದೆ. ರಾಮನಿಗೇನಾದರೊಂದು ಅಶ್ರೇಯಸ್ಸು ಉಂಟಾಗುವದೆಂದು ಕಂಡ ರೆ ಅದನ್ನು ಪರಿಹರಿಸುವದಕ್ಕಾಗಿ ತನ್ನ ಪ್ರಾಣವನ್ನೇ ಸೂರೆ ಮಾಡು ವದಕ್ಕೂ ಅವನು ಹಿಂದೆಗೆಯುತ್ತಿರಲಿಲ್ಲ. ಇದನ್ನು ಒರೆ ಹಚ್ಚಿ ನೋಡಿದ ಒಂದು ಪ್ರಸಂಗವೇ ಅವನ ಇತಿಹಾಸದಲ್ಲಿ ಬಂದಿದೆ. ಒಮ್ಮೆ ರಾಮನು ಯಮನೊಡನೆ ಅಂತರಂಗದಲ್ಲಿ ಮಾತಾಡಬೇಕಾ ಗಿತ್ತು. ಆ ಅಂತರಂಗಕ್ಕೆ ವಿಘ್ನವನ್ನು ತಂದವರಿಗೆ ಮರಣಶಿಕ್ಷೆ ಯಾಗುವದೆಂದು ರಾಮನ ಆಜ್ಞೆಯಾಗಿತ್ತು. ಲಕ್ಷ್ಮಣನು ದ್ವಾರ

ಪಾಲಕನಾಗಿ ನಿಂತನು. ಆ ಸಮಯದಲ್ಲಿ ದೂರ್ವಾಸರು ರಾಮನ ದರ್ಶನಕ್ಕೆ ಬಂದರು. ಏಕಾಂತವು ಮುಗಿಯುವವರೆಗೂ ದಯ ವಿಟ್ಟು ತಡೆಯಬೇಕೆಂದು ಲಕ್ಷ್ಮಣನು ದೂರ್ವಾಸರನ್ನು ಬೇಡಿ ಕೊಂಡನು. ಕೋಪಸ್ವಭಾವದವರಾದ ಅವರು ತನ್ನನ್ನು ತಡೆದರೆ ರಾಮನಿಗೂ ರಾಮರಾಜ್ಯಕ್ಕೂ ಶಾಪವನ್ನು ಕೊಡುತ್ತೇನೆಂದರು. ಏಕಾಂತಕ್ಕೆ ವಿಘ್ನವನ್ನು ತಂದ ಫಲವಾದ ಮರಣ ಶಿಕ್ಷೆಯನ್ನು ತನ್ನ ಮಡಿಲಿಗೆ ಹಾಕಿಕೊಂಡಾದರೂ ರಾಮನಿಗೂ ರಾಮರಾಜ್ಯಕ್ಕೂ ಬರುವ ಭಯವನ್ನು ತಪ್ಪಿಸಬೇಕೆಂದು ಲಕ್ಷ್ಮಣನು ತಾನೇ ಒಳಕ್ಕೆ ನುಗ್ಗಿ ಏಕಾಂತಕ್ಕೆ ವಿಘ್ನಕಾರಕನಾಗಿ ಅದರ ಫಲವಾಗಿ ಸರಯೂ ನದಿಗೆ ಹೋಗಿ ತನ್ನ ದೇಹವನ್ನು ತ್ಯಾಗಮಾಡಿದನು.

ಒಬ್ಬರ ಹಾನಿಯನ್ನು ಇನ್ನೊಬ್ಬರು ಸಹಿಸದಿರುವದು ಒಡ ಹುಟ್ಟಿದವರಿಗೆ ಭೂಷಣವು.

''ಧರಣಿಯೊಳಗಣ್ಣ ತಮ್ಮಂ |
ದಿರ ಭಾವಂ ಕಣ್ಗಳೆರಡರಂತಿರೆ ತೋರ್ಕುಂ ||
ಇರದೊಂದು ಕಣ್ಗೆ ರುಜೆ ಬರೆ |
ಪರಿಕಿಸುತಿನ್ನೊಂದು ಕಣ್ಣದೇಂ ಸಹಿಸುವದೇ? ||''

— ಕೃಷ್ಣಮಹೀಶ್ವರೀ

ಹಿಂದೆ ಮೈಸೂರಲ್ಲಿ ರಾಜೊಡೆಯರು ಆಳುತ್ತಿದ್ದಾಗ ಅವರ ಅಣ್ಣಂದಿರಾದ ಬೆಟ್ಟದೊಡೆಯರು ರಾಜಕಾರ್ಯದಲ್ಲಿ ರಾಜೊಡೆಯರಿಗೆ ವಿರುದ್ಧವಾಗಿ ಏನೋ ಒಳಸಂಚುಮಾಡಿದರು. ಇದಕ್ಕಾಗಿ ರಾಜೊ ಡೆಯರು ಬೆಟ್ಟದೊಡೆಯರನ್ನು ಸೆರೆಯಲ್ಲಿಟ್ಟರು. ಈ ಸಮಯದಲ್ಲಿ ರಾಜೊಡೆಯರ ಮೆಚ್ಚುಗೆಯನ್ನು ಪಡೆಯಬೇಕೆಂದು ನರಸರಾಜ ನೆಂಬುವನು ಬೆಟ್ಟದೊಡೆಯರ ಕಣ್ಣನ್ನು ಕೀಳಿಸುವ ಎತ್ತುಗಡೆ ಯನ್ನು ಮಾಡಿದನು. ಸ್ಥೂಲದೃಷ್ಟಿಯಿಂದ ನೋಡಿದರೆ ಅಣ್ಣನನ್ನು ಸೆರೆಯಲ್ಲಿಟ್ಟಿದ್ದ ರಾಜೊಡೆಯರಿಗೆ ಇದು ಸಮ್ಮತವಾಗಬಹುದಾಗಿ ತ್ತಾದರೂ ರಾಜೊಡೆಯರು ರಾಜಕಾರ್ಯದ ದೃಷ್ಟಿಯಿಂದ ಅಣ್ಣ ನನ್ನು ಸೆರೆಯಲ್ಲಿಟ್ಟಿದ್ದರೇ ಹೊರತು ಎರಡನೆಯ ದ್ವೇಷದಿಂದ ಅಲ್ಲ;

ಅವರ ಹೃದಯದಲ್ಲಿ ಬಂಧುಪ್ರೇಮದ ಝುರಿಯು ಸಜೀವವಾಗಿ ಹರಿಯುತ್ತಲೇ ಇತ್ತು. ಆದ್ದರಿಂದಲೇ ಅವರು ಸರಸರಾಜನನ್ನು ಕರೆದು ಮುಂದೆ ಹೀಗೆ ದುಷ್ಟಕಲ್ಪನೆಯನ್ನು ತಂದುಕೊಳ್ಳಬಾರ ದೆಂದು ವಾಗ್ದಂಡನೆಯನ್ನು ಮಾಡಿದರು.

ಕೆಲವು ಬಗೆಯ ಸ್ವಾರ್ಥದ ಆವೇಶದಿಂದ ಅಣ್ಣಾತಮ್ಮಂದಿರ ಒಕ್ಕಟ್ಟು ತಪ್ಪಿರುವ ಉದಾಹರಣೆಗಳು ಎಷ್ಟೋ ಉಂಟು. ಆದರೂ ಅವರ ಧಮನಿಯಲ್ಲಿ ಧರ್ಮಪ್ರಿಯರಾದ ಪೂರ್ವಿಕರ ರಕ್ತಕಣಗಳ ಬಿಸಿ ಅಷ್ಟಿಷ್ಟಾದರೂ ಇದ್ದರೆ ಅವರಲ್ಲಿ ಒಳ್ಳೆ ಬಿಕ್ಕಟ್ಟಿನ ಸಂದರ್ಭ ದಲ್ಲಾದರೂ ಬಂಧುಪ್ರೇಮವು ತೋರದೆ ಹೋಗುವದೆ ಇಲ್ಲ. ಪ್ರತಾ ಪಸಿಂಹನು ಮುಸಲ್ಮಾನರ ಅತಿಕ್ರಮಪ್ರವೇಶಕ್ಕೆ ಅತ್ಯಂತ ಪ್ರಬಲ ನಾದ ಪ್ರತಿಕಕ್ಷಿಯಾಗಿದ್ದನು. ಅವನ ತಮ್ಮನಾದ ಶಕ್ತಸಿಂಹನು ಅದಕ್ಕೆ ವಿರೋಧವಾಗಿ ಅಕಬರನ ಅನುಗ್ರಹಕ್ಕೆ ಅಂಗಲಾಚಿ ಮುಸ ಲ್ಮಾನರ ಭಿಕ್ಷಾನ್ನಕ್ಕೆ ಬಾಯಿನೀರು ಸುರಿಸಿಕೊಂಡಿದ್ದನು. ಹೀಗಿ ರುವಾಗ ಅಕಬರನಂತು ಪ್ರತಾಪನ ಮೇಲೆ ದಂಡೆತ್ತಿ ಬರುವದು ಸ್ವಭಾವವೇ ಅಷ್ಟೆ. ಅದರಲ್ಲಿ ದೈವಯೋಗದಿಂದ ಶಕ್ತಸಿಂಹನೇ ಮುಂದಾಳಾಗಿ ಕೈ ಎತ್ತಿಕೊಂಡು ಬರಬೇಕಾಯಿತು. ಅಕಬರನ ಉರುಬೆಗೆ ಪ್ರತಾಪನು ಬೆನ್ನುಕೊಟ್ಟು ಓಡಿದನು. ಶಕ್ತಸಿಂಹನೇ ಅವನನ್ನು ಹಿಡಿಯುವದಕ್ಕೆ ಹಿಂಬಾಲಿಸಿದನು. ಕೊನೆಗೆ ಒಂದು ಕಡೆ ಇಬ್ಬರೂ ಸೇರಿದರು. ಪರಿಣಾಮವೇನಾಯಿತು! ಪ್ರತಾಪನ ಪರಾಕ್ರಮದ ಉಲ್ಬಣವನ್ನು ಮನಸ್ಸಿಗೆ ತಂದು ಕೊಂಡ ಹಾಗೆಲ್ಲ ಶಕ್ತಸಿಂಹನ ಹೃದಯದಲ್ಲಿ ಶತ್ರುಭಾವದ ಬಿಸಿನೀರ ಬುಗ್ಗೆಯು ಉಕ್ಕೇರುವದಕ್ಕೆ ಬದಲು ಬಂಧುಭಾವದ ಶೀತಲವಾದ ಝುರಿಯ ಅಕಾಲಪ್ರವಾಹವು ಉಬ್ಬಿ ಬಂತು. ಸೋತುಹೋಗಿದ್ದ ಕುದುರೆಯ ದೆಸೆಯಿಂದ ತನ್ನ ಕೈಗೆ ಸಿಕ್ಕಿದ ಪ್ರತಾಪನ ರಕ್ಷಣೆಗಾಗಿ ಶಕ್ತ ಸಿಂಹನು ತನ್ನ ಬಲವಾದ ಕುದುರೆಯನ್ನು ಕೊಟ್ಟು ಅವನನ್ನು ಸುರಕ್ಷಿತವಾಗಿ ಮುಂದಕ್ಕೆ ಸಾಗಿಸಿದನು.

ಪ್ರತಾಪನ ಉದಾಹರಣೆಯಲ್ಲಿ ಪ್ರತಾಪನಿಗೂ ಶಕ್ತಸಿಂಹನಿಗೂ

ಹಗೆತನವೇನೂ ಇರಲಿಲ್ಲ. ಒಬ್ಬರಿಗೊಬ್ಬರು ಎಣ್ಣೆಸೀಗೆಯಂತಾಯಿ. ಯಂತೆ ಆಗದೆ ಇದ್ದ ಕೌರವರೂ ಪಾಂಡವರೂ ಒಂದು ಬಿಕ್ಕಟ್ಟಿನ ಪ್ರಸಂಗದಲ್ಲಿ ಒಂದಾದ ಉದಾಹರಣೆಯು ಮಹಾಭಾರತದಲ್ಲಿ ಉಜ್ವ್ವ ಲವಾಗಿ ಶೋಭಿಸುತ್ತಿದೆ. ಪಾಂಡವರು ವನವಾಸದಲ್ಲಿ ಕಷ್ಟಪಡು ತ್ತಿರುವ ಸಮಯದಲ್ಲಿ ಕೌರವರು ತಮ್ಮ ಅಟ್ಟಹಾಸವನ್ನು ಅವರಿಗೆ ತೋರಿಸಿ ಅವರ ಹೊಟ್ಟೆಯುರಿಯುವಂತೆ ಮಾಡಬೇಕೆಂದು ಅಲ್ಲಿಗೆ ಹೋದರು. ದೈವಯೋಗದಿಂದ ಒಬ್ಬ ಗಂಧರ್ವನು ಕೌರವೇಶ್ವರ ನನ್ನು ಕಾರಣಾಂತರದಿಂದ ಸೆರೆಹಿಡಿದುಕೊಂಡು ಹೋದನು. ಗಂಧ ರ್ವನ ಮೇಲೆ ಕೌರವನ ಕಡೆಯ ಯಾರ ಕೈಯೂ ಸಾಗಲಿಲ್ಲ. ಇನ್ನು ಅವನ ಪರಿವಾರದವರಿಗೆ ದಿಕ್ಕು ಯಾರು? ಅವನ ಹೆಂಡತಿ ಮೊದಲಾದವರು ಧರ್ಮರಾಯನಿಗೇ ಶರಣುಹೊಕ್ಕರು. ಧರ್ಮ ರಾಯನು ಅರ್ಧರಾಜ್ಯಕ್ಕೇ ನ್ಯಾಯವಾದ ಅಧಿಕಾರಿಯಾಗಿದ್ದರೂ ಎಲ್ಲ ರಾಜ್ಯದ ಮೇಲೆಯೂ ಕಾಲುಚಾಚಿಕೊಂಡಿದ್ದ ಕೌರವೇಶ್ವರನು ಒಂದು ಸೂಜಿಯ ಮೊನೆಯಷ್ಟು ಭೂಮಿಯನ್ನು ಕೂಡ ಕೊಡುವದಿಲ್ಲ ವೆಂದು ಹೇಳಿ ಅಷ್ಟಕ್ಕೇ ಬಿಡದೆ ಧರ್ಮರಾಯನನ್ನು ತಮ್ಮಂದಿರೊಡನೆ ವನವಾಸಕ್ಕೆ ಕೂಡ ಅಟ್ಟಿಬಿಟ್ಟಿದ್ದನು. ಇದರ ಜೊತೆಗೆ ತನ್ನನ್ನು ನಾಚಿಕೆಗೊಳಿಸಬೇಕೆಂದು ಬಂದಿರುವ ಭ್ರಾತೃದ್ರೋಹಿಗೆ ವಿಪತ್ತೊದ ಗಿದ್ದನ್ನು ಕೇಳಿ ಧರ್ಮರಾಯನ ಮನಸ್ಸಿನಲ್ಲಿ ಯಾವ ಪರಿಣಾಮ ವಾಗಿರಬಹುದು! ತನ್ನ ಒಡಹುಟ್ಟಿದವರ ಮಾವೆಯವರಿಗೆ ಬಂದ ದುರವಸ್ಥೆಯು ಅವನಿಗೆ ಸಹನವಾಗಲಿಲ್ಲ. ಆಗ ಅವನು ತನ್ನ ತಮ್ಮಂದಿರನ್ನೆಲ್ಲ ಕರೆದು

"ತೇ ಶತಂ ಹಿ ವಯಂ ಪಂಚ ಪರಸ್ಪರವಿವಾದನೇ ।
ಪರೈಸ್ತು ವಿಗ್ರಹೇ ಪ್ರಾಪ್ತೇ ವಯಂ ಪಂಚಾಧಿಕಂ ಶತಮ್ ॥"

ಎಂದರೆ "ಹೆ, ತಮ್ಮಂದಿರಾ, ನಮ್ಮನಮ್ಮಲ್ಲಿ ಜಗಳವಾದರೆ ಅವರು ನೂರು ಜನರೂ ಒಂದು; ನಾವೈವರೇ ಒಂದು; ಮತ್ತೊಬ್ಬ ರೊಡನೆ ಯುದ್ಧವು ಬಂದೊದಗಿದಾಗ ನಾವು ನೂರೈವರೂ ಒಂದು." ಎಂದು ಹೇಳಿ ಅರ್ಜುನನ ಮೂಲಕವಾಗಿ ಕೌರವೇಶ್ವರನನ್ನು

ಗಂಧರ್ವನ ಬಂಧನದಿಂದ ಬಿಡಿಸಿ ತಂದು ಅವರ ಪರಿವಾರದವರನ್ನೆಲ್ಲ ಸಮಾಧಾನಗೊಳಿಸಿದ್ದಾನೆ. ಇದರಲ್ಲಿ ಧರ್ಮರಾಯನ ಬಂಧುಭಾವದ ಬಣ್ಣದ ಮೆರುಗು ಎಷ್ಟು ಚೆನ್ನಾಗಿದೆ!

ಹೀಗೆ ಬಿಕ್ಕಟ್ಟಿನ ಪ್ರಸಂಗದಲ್ಲಿ ಬಂಧುಭಾವವನ್ನು ಮರೆಯದೆ ಹೋದದ್ದನ್ನು ಎಷ್ಟೋ ಶ್ಲಾಘಿಸಿದರೂ ಅಣ್ಣತಮ್ಮಂದಿರು ಒಕ್ಕಟ್ಟಾಗದೆ ಬಿಡಿಬಿಡಿಯಾಗುವದು ಎಂದಿಗೂ ಅಭ್ಯುದಯದ ಸಾಧನವಲ್ಲ. ಅವರು ಒಕ್ಕಟ್ಟಿನಿಂದ ಎಂಥ ಅಸಾಧ್ಯಕಾರ್ಯಗಳನ್ನಾದರೂ ಸಾಧಿಸಿ ಬಿಡಬಹುದು. ಆದ್ದರಿಂದ ಅವರು ಒಕ್ಕಟ್ಟಾಗಿರುವದೆ ಒಳ್ಳೆಯದು.

"ಸಲೆ ಸೂಕ್ಷ್ಮತಂತುಗಳ್ಸೇ ।
ರಲದೊಂದೆಡೆ ಪಗ್ಗವಾಗಿ ತಡೆವುವು ಗಜಮಂ ॥
ನಿಲಲೊಂದೆಸೆ ದಾಯಾದರ ।
ಕುಲಂ ಮಹಾಕಾರ್ಯವಾದೊಡಂ ನೆರೆ ಸಾಧ್ಯಂ ॥"

—ನೀತಿಸಾರ

"ಹುಟ್ಟುವಾಗ ಅಣ್ಣತಮ್ಮಂದಿರು; ಬೆಳೆಯುವಾಗ ದಾಯಾದರು" ಎಂಬ ನಾಣ್ಣುಡಿಯಂತಾಗುವದು ನಾಶದ ಕಡೆಯ ಲಕ್ಷಣವೇ ಸರಿ. "ಇಬ್ಬರ ನ್ಯಾಯ ಒಬ್ಬರ ಆಯ", "ಒಕ್ಕಟ್ಟು ತಪ್ಪಿದರೆ ಇಕ್ಕಟ್ಟಿನಲ್ಲಿ ಬೀಳುವರು", "ಹೊಂದಿ ನಡೆದರೆ ಲಾಭ; ಹೋರಾಡಿದರೆ ಕಷ್ಟ"– ಈ ಗಾದೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಅಣ್ಣತಮ್ಮಂದಿರೆಲ್ಲರೂ ಯಾವಾಗಲೂ ಒಕ್ಕಟ್ಟಾಗಿ ಇರುವ ಯತ್ನವನ್ನು ಮಾಡಬೇಕು.

ಧರ್ಮದ ಮೂರ್ತಸ್ವರೂಪನಾದ ಧರ್ಮರಾಯನು ಕೌರವರೊಡನೆ ಯುದ್ಧವನ್ನು ಮಾಡಿದ್ದರಲ್ಲಿ ಬಾಂಧವಪ್ರೇಮದ ಅಭಾವವು ತೋರುವದೆಂದು ಯಾರಾದರೂ ಯೋಚಿಸಬಹುದು. ಧರ್ಮರಾಯನು ಯುದ್ಧವಾಗದಿರುವದಕ್ಕೆ ಎಷ್ಟು ಪ್ರಯತ್ನಗಳು ಬೇಕೋ ಅಷ್ಟನ್ನೂ ಮಾಡಿದನು. ಅದು ಯಾವದೂ ನಡೆಯದೆ ಹೋದ ಮೇಲೆ ಉಪಾಯಾಂತರವಿಲ್ಲದೆ ಯುದ್ಧವನ್ನು ಹೂಡಬೇಕಾಯಿತು. ಇದರ ಮೇಲೆ ಕೌರವರೂ ಪಾಂಡವರೂ ಸಹೋದರರಲ್ಲ. ಕೌರವರ ತಂದೆ

ತಾಯಿಗಳೇ ಬೇರೆ; ಪಾಂಡವರ ತಂದೆತಾಯಿಗಳೇ ಬೇರೆ. ಅವರಿಬ್ಬರೂ ಅಣ್ಣತಮ್ಮಂದಿರ ಮಕ್ಕಳು; ಹಾಗೆಯಲ್ಲಿ ಸಹೋದರರು. ಒಡಹುಟ್ಟಿದವರ ಮೇಲಿನ ಬಂಧುಭಾವದ ವಿಷಯದಲ್ಲಿ ಧರ್ಮರಾಯನಲ್ಲಿ ಯಾವ ಕೊರತೆಯೂ ಇಲ್ಲ. ಧರ್ಮರಾಯನು ಹೂಡಿದ ಯುದ್ಧದಲ್ಲಿ ಕರ್ಣನ ವಧೆಯಾದದ್ದು ನಿಜ. ಆದರೆ ಕರ್ಣನು ತನ್ನ ಅಣ್ಣನೆಂದು ಧರ್ಮರಾಯನಿಗಾಗಲಿ ಅವನ ತಮ್ಮಂದಿರಿಗಾಗಲಿ ಯಾರಿಗೂ ತಿಳಿಯದು. ಯುದ್ಧವೆಲ್ಲ ಮುಗಿದ ಮೇಲೆ ಧರ್ಮರಾಯನು ಎಲ್ಲರಿಗೂ ಧರ್ಮೋದಕವನ್ನು ಬಿಡುವಾಗ ಕುಂತಿಯು ಬಂದು ಕರ್ಣನ ನಿಜಸ್ಥಿತಿಯನ್ನು ತಿಳಿಸಿದಳು. ಆಗ ತನ್ನಿಂದ ಒಡಹುಟ್ಟಿದವನ ವಧೆಯಾದದ್ದಕ್ಕಾಗಿ ಧರ್ಮರಾಯನು ಬಹಳ ಪಶ್ಚಾತ್ತಾಪಪಟ್ಟಿರುವನು.

ಧರ್ಮರಾಯನ ಬಂಧುಪ್ರೇಮವು ಕೇವಲ ತನ್ನ ತಾಯ ಹೊಟ್ಟೆಯಲ್ಲಿ ಹುಟ್ಟಿದವರ ಮೇಲೆ ಮಾತ್ರವೇ ಅಲ್ಲ; ತನ್ನ ಮಲತಾಯಾದ ಮಾದ್ರಿಯ ಹೊಟ್ಟೆಯಲ್ಲಿ ಹುಟ್ಟಿದವರ ಮೇಲೆಯೂ ಬೇಕಾದಷ್ಟಿತ್ತು. ಅವರು ವನವಾಸದಲ್ಲಿದ್ದಾಗ ಭೀಮಾರ್ಜುನನಕುಲಸಹದೇವರು ನಾಲ್ವರೂ ಕಾರ್ಯಾಂತರದಿಂದ ಕಾಡಿಗೆ ಹೋಗಿ ಬಾಯಾರಿ ನೀರುಕುಡಿಯಬೇಕೆಂದಿದ್ದಾಗ ಯಕ್ಷನೊಬ್ಬನು ತನ್ನ ಪ್ರಶ್ನೆಗೆ ಉತ್ತರವನ್ನು ಹೇಳದೆ ಕುಡಿದರೆ ಸಾಯುವಿರೆಂದು ಹೇಳಿದನು. ತಮ್ಮ ಬಾಯಾರಿಕೆಯ ಸಂಕಟದಲ್ಲಿ ಅವರು ಆ ಮಾತಿನ ಕಡೆಗೆ ಕಿವಿಗೊಡಲಿಲ್ಲ; ನೀರು ಕುಡಿದು ಸತ್ತರು. ಧರ್ಮರಾಯನು ಬಂದಾಗ– ಅವನಿಗೂ ಎಷ್ಟೋ ಸಂಕಟವಾಗಿದ್ದರೂ– ತಾಳ್ಮೆಯಿಂದ ಯಕ್ಷನಿಗೆ ಉತ್ತರವನ್ನೆಲ್ಲ ಹೇಳಿದನು. ಆಗ ಯಕ್ಷನು ತಮ್ಮಂದಿರಲ್ಲಿ ಹೆಚ್ಚು ಬೇಕಾದವರನ್ನು ಬದುಕಿಸಿಕೊಡುತ್ತೇನೆಂದನು. ಧರ್ಮರಾಯನು ತನ್ನ ತಾಯ ಹೊಟ್ಟೆಯಲ್ಲಿಯೇ ಹುಟ್ಟಿದ ಭೀಮಾರ್ಜುನರ ಜೀವವನ್ನು ಮೊದಲು ಕೇಳದೆ ತನ್ನ ಮಲತಾಯ ಮಕ್ಕಳಾದ ನಕುಲಸಹದೇವರನ್ನು ಮೊದಲು ಬದುಕಿಸಿಕೊಂಡನು.

ಮಲತಾಯ ಮಕ್ಕಳಲ್ಲಿ ಬಂಧುಪ್ರೇಮವನ್ನು ತೋರಿಸಿರು

ವದು ಭೀಷ್ಮರ ನಡೆವಳಿಕೆಯಲ್ಲಿಯೂ ಎದ್ದು ಕಾಣುತ್ತದೆ. ಭೀಷ್ಮರು ತಮ್ಮ ಮಲತಾಯ ಮಗನಾದ ವಿಚಿತ್ರವೀರ್ಯನಿಗೆ ಮದುವೆಯನ್ನು ಮಾಡುವದಕ್ಕಾಗಿ ಕಾಶೀರಾಜನ ಮಕ್ಕಳಾದ ಅಂಬಿಕೆ, ಅಂಬಾಲಿಕೆ ಎಂಬುವರನ್ನು ಸ್ವಯಂವರಕಾಲದಲ್ಲಿ ಸ್ವಸಾಹಸದಿಂದ ಗೆದ್ದು ತಂದು ತಮ್ಮ ಮಲತಮ್ಮನ ಅಭ್ಯುದಯಕ್ಕೆ ಕಾರಣನಾಗಿದ್ದಾರೆ.

ಲೋಕದಲ್ಲಿ ತನಗೆ ಸಮೀಪವಾದ ಎರಡನೆಯ ವಸ್ತು ಒಡಹುಟ್ಟಿದವರ ಹೊರತು ಬೇರೆ ಇಲ್ಲ. ಒಬ್ಬತಾಯ ಮಕ್ಕಳಾಗಲಿ, ಮಲತಾಯ ಮಕ್ಕಳಾಗಲಿ, ಅಣ್ಣತಮ್ಮಂದಿರ ಮಕ್ಕಳಾಗಲಿ ಒಕ್ಕಟ್ಟಿನಿಂದ ಇರುವದಕ್ಕೇ ಸರ್ವಸನ್ನಾಹವನ್ನೂ ಮಾಡುವದು ಶ್ರೇಯಸ್ಕರವು.



# ಕುಲೋನ್ನತಿಯ ರಕ್ಷಣೆ



ಒಬ್ಬತಾಯ ಹೊಟ್ಟೆಯಲ್ಲಿ ಹುಟ್ಟಿದವರು ಆ ತಾಯನ್ನು ರಕ್ಷಣೆ ಮಾಡುವದಲ್ಲದೆ ಒಡಹುಟ್ಟಿದವರಲ್ಲೆಲ್ಲ ಹೇಗೆ ಬಂಧುಭಾವದಿಂದ ವರ್ತಿಸಬೇಕೋ ಹಾಗೆ ಒಂದು ಕುಲದಲ್ಲಿ ಹುಟ್ಟಿದವರು ಆ ಕುಲದ ಹೆಚ್ಚುಗಾರಿಕೆಯನ್ನು ರಕ್ಷಣೆಮಾಡುವದಲ್ಲದೆ ಆ ಕುಲದವರಲ್ಲೆಲ್ಲ ತನ್ನ ಸಹಾನುಭೂತಿಯನ್ನು ತೋರಿಸುವದಗತ್ಯವು. ಪ್ರತಿಯೊಂದು ಕುಲದಲ್ಲಿಯೂ ಏನಾದರೊಂದು ಹೆಚ್ಚುಗಾರಿಕೆಯಿರುತ್ತದೆ. ಆ ಕುಲದ ಮೂಲಪುರುಷನಲ್ಲಿ ಅದು ಒಹುಮಟ್ಟಿಗೆ ಪೂರ್ಣಸ್ವರೂಪ ವಲ್ಲಿದ್ದು ಆ ಯೋಗ್ಯತೆಯು ಅವನ ರಕ್ತಪರಂಪರೆಯಲ್ಲಿ ಇಳಿದು ಬರುತ್ತ ಕಾಲಕ್ರಮದಿಂದ ಅದರ ವೇಗವು ಸ್ವಭಾವವಾಗಿ ಕುಂದುತ್ತ ಬರುತ್ತದೆ. ಆದರೆ ಆ ಕುಲದಲ್ಲಿ ಯಾವನಾದರೊಬ್ಬ ಅಸಹಾಯ ಶೂರನು ಹುಟ್ಟಿದಾಗ ಅವನ ಪ್ರತಿಭಾವಿಶೇಷದಿಂದ ಆ ಯೋಗ್ಯ ತೆಯು ಮತ್ತಷ್ಟು ಪುಟಗೊಂಡು ಪ್ರಜ್ವಲಿಸುತ್ತದೆ. ಹೀಗೆ ತನ್ನಲ್ಲಿ ಬೀಜರೂಪದಲ್ಲಿರುವ ಒಂದು ಹೆಚ್ಚುಗಾರಿಕೆಯನ್ನು ಕುಂದ ಗೊಡದೆ ತನ್ನ ಸಾಹಸದಿಂದ ಅದನ್ನು ದೇದೀಪ್ಯಮಾನವಾಗಿ ಬೆಳಗ ಬಲ್ಲವನಿಂದ ಆ ಕುಲವು ಧನ್ಯವಾಗುವದು. ಆ ಪ್ರಯತ್ನಶಾಲಿ ಯಿಂದಲೆ ಕುಲಕ್ಕೆ ಜೀವಕಳೆ ಬರುವದು. ಕುಲವು ಎಷ್ಟೋ ಸಂದ ರ್ಭದಲ್ಲಿ ಅವರ ಹೆಸರನ್ನು ಮುಂದುಮಾಡಿಕೊಂಡೇ ಪ್ರಸಿದ್ಧವಾಗು ವದು. ಉದಾಹರಣೆಗೆ ಶ್ರೀರಾಮಚಂದ್ರಮೂರ್ತಿಯು ಅವತಾರ ಮಾಡಿದ್ದು ಸೂರ್ಯವಂಶವಾದರೂ ಆ ವಂಶದಲ್ಲಿ ರಘುಮಹಾ ರಾಯನು ತೋರಿಸಿದ ಶೌರ್ಯ್ಯಾದಾರ್ಯ್ಯಾದಿಗಳಿಂದ ಆ ವಂಶವು ರಘು ವಂಶವೆಂದೂ ಹೆಸರುಗೊಂಡಿರುವದು. ಸೂರ್ಯವಂಶದಲ್ಲಿ ರಘು ಮಹಾರಾಜನು ಕುಲದೀಪಕನು. ಕುಲದಲ್ಲಿ ಹುಟ್ಟುವ ಪ್ರತಿ ಯೊಬ್ಬನೂ ಎಷ್ಟೋ ಜನರಲ್ಲಿ ತಾನೊಬ್ಬನಾಗಿ ಹುಟ್ಟಿಸಾಯದೆ

ತಾನೇ ಕುಲದೀಪಕನಾಗುವಂತೆ ತನ್ನ ಆಚರಣೆಯನ್ನಿಡಬೇಕು. ಇಂಥ ಕುಲದೀಪಕರು ಒಬ್ಬಿಬ್ಬರಾಗುವರೇ ಹೊರತು ಹೆಚ್ಚಾಗಿ ಆಗುವದಿಲ್ಲವಾದರೂ ತಾನು ಆ ಒಬ್ಬಿಬ್ಬರಲ್ಲಿಯೇ ಒಬ್ಬನಾಗುವದಕ್ಕೆ ಪ್ರತಿಯೊಬ್ಬನೂ ತನ್ನ ಸರ್ವಸಾಹಸವನ್ನೂ ಮಾಡಬೇಕು. ಇಂಥ ಪ್ರಯತ್ನದಲ್ಲಿ ಯಾರು ಪ್ರಬಲರಾಗುವರೊ ಅವರು ಕುಲದೀಪಕರಾಗುವರು.

ತನ್ನ ಕುಲವು ಯಾವ ಯೋಗ್ಯತೆಯಲ್ಲಿ ಹೆಚ್ಚುಗಾರಿಕೆಯನ್ನು ಪಡೆದಿತ್ತೆಂಬುದನ್ನು ಪ್ರತಿಯೊಬ್ಬನೂ ತಿಳಿದಿರಬೇಕು. ಇದರಿಂದ ತನ್ನ ಉನ್ನತಿಯನ್ನು ತಾನು ಮಾಡಿಕೊಳ್ಳುವದಕ್ಕೆ ಹೆಚ್ಚು ಸಹಾಯವಾಗುವದು. ಹಿಂದೆ ಆನೇಗೊಂದಿಯಲ್ಲಿ ಹುಕ್ಕಬುಕ್ಕರೆಂಬಿಬ್ಬರು ಕುರುಬರು ಅಲ್ಲಿಯ ಪಾಳಯಗಾರನಲ್ಲಿ ದಳಪತಿಗಳಾಗಿದ್ದರು. ದೈವ ದುರ್ವಿಪಾಕದಿಂದ ಮುಸಲ್ಮಾನರ ದಂಡು ಬಂದು ಆ ಸಮೀಪದ ದೇಶವನ್ನೆಲ್ಲ ಧೂಳಿಪ್ಸಿಸಿ ಮಕ್ಕಳುಮರಿಗಳನ್ನೆಲ್ಲ ಕೊಂದು ನಾಡನ್ನೆಲ್ಲ ಸೂರೆಮಾಡಿಬಿಟ್ಟಿತ್ತು. ಈಗ ಆ ದಂಡಿನ ಕೆಂಗಣ್ಣು ಆನೇಗೊಂದಿಯ ಮೇಲೆ ಬಿತ್ತು. ಅದರ ಉರುಬೆಗೇ ಎಷ್ಟೋ ಜನರ ನಾಲಿಗೆಯು ಒಣಗಿ ಎದೆಯು ನೀರು ಗಾರಾಯಿತು. ಊರೆಲ್ಲ ಮರಣೋನ್ಮುಖವಾಗಿ ಗೋಳಿಡುವದಕ್ಕಾರಂಭವಾಯಿತು. ಹೆಂಗಸರುಮಕ್ಕಳೆಲ್ಲ ಎದೆಯೊಡೆದು ಬಿದ್ದರು. ಈ ಸಮಯದಲ್ಲಿ ಬುಕ್ಕನ ಹೆಂಡತಿಗೆ ತನ್ನ ಕುಲದ ಹೆಚ್ಚುಗಾರಿಕೆಯು ನೆನಪಾಗದಿದ್ದರೆ ಆ ದೇಶದ ಹೆಸರೇ ಅಳಿದು ಹೋಗುತ್ತಿತ್ತು. ಬುಕ್ಕನ ಹೆಂಡತಿಯ ಹೆಸರು ಹೊನ್ನಮ್ಮ. ಆಕೆ ಆಸಮಯದಲ್ಲಿ ಗಂಡನನ್ನು ಕುರಿತು ಹೇಳಿದಳೆಂದು ನಮ್ಮ ಶ್ರೀವಿದ್ಯಾರಣ್ಯಕಾವ್ಯದಲ್ಲಿರುವದೇನೆಂದರೆ—

> **"ಪಾಂಡವ ಸಂಬಂಧದ ನೀಂ |**
> **ಗಂಡನಿರಲ್ಸ್ತ್ರೀಸಮಾಜರಕ್ಷಣೆಯಂ ||**
> **ಕಂಡರಿಯದಾದೆನಲ್ಲದೆ |**
> **ಕಂಡೇಂ ಹಾಳಾದ ಹಸ್ತಿನಾವತಿಯಂ ||"**

ಬುಕ್ಕನು ಪಾಂಡವರ ಕುಲಪರಂಪರೆಯಲ್ಲಿ ಜನ್ಮವೆತ್ತಿದವನು.

ಪಾಂಡವರು ಸ್ತ್ರೀಯ ಮಾನರಕ್ಷಣೆಗಾಗಿಯೇ ತಮ್ಮ ಸಾಹಸವನ್ನು ವೆಚ್ಚಮಾಡಿ ಪ್ರಸಿದ್ಧರಾದವರು. ತನ್ನ ಹೆಂಡತಿಯಾದ ದ್ರೌಪದಿಗೆ ತೊಡೆಯನ್ನು ತೋರಿಸಿದ ಕ್ಷುದ್ರಬುದ್ಧಿಗೆ ತಕ್ಕ ಪ್ರತೀಕಾರವನ್ನು ಮಾಡುವದಕ್ಕಾಗಿಯೇ ಭೀಮಸೇನನು ಕೌರವೇಶ್ವರನನ್ನು ತೊಡೆಗೆ ಹೊಡೆದೇ ಕೊಲ್ಲುವೆನೆಂದು ವೀರಪ್ರತಿಜ್ಞೆಯನ್ನು ಮಾಡಿದನು. ನೆರೆದ ಸಭೆಯ ನಡುವೆ ತನ್ನ ಧರ್ಮಪತ್ನಿಯಾದ ದ್ರುಪದತನೂಜೆಯ ಸೀರೆಯನ್ನು ಸೆಳೆದ ಅಪರಾಧದ ಫಲವನ್ನು ಉಣ್ಣಿಸುವದಕ್ಕೇ ಭೀಮನು ದುಃಶಾಸನನನ್ನು ಕೊಂದು ಅವನ ಕರುಳನ್ನು ಹಾರವಾಗಿ ಹಾಕಿಕೊಂಡು ಅವನ ರಕ್ತವನ್ನು ಕುಡಿದು ತನ್ನ ಅಂತಃಸಂತಾಪ ವನ್ನು ಶಾಂತಿಮಾಡಿಕೊಂಡದ್ದು. ಹಾಗೆಯೇ ಕೀಚಕನನ್ನೂ ಉಪ ಕೀಚಕರನ್ನೂ ದಿಗ್ಬಲಿಯಾಗಿ ಕೊಟ್ಟದ್ದಕ್ಕೂ ತನ್ನ ಪತ್ನಿಯನ್ನು ಕೆಣಕಿದ್ದೇ ಕಾರಣ. ಇದರಿಂದ ಸ್ತ್ರೀಯರ ಮಾನರಕ್ಷಣೆಯ ಕಡೆಗೆ ಅವರ ಒಲವು ಬಹಳವಾಗಿದ್ದಂತೆ ತೋರುವದು. ಮುಂಗಾ ಣದ ಮುಸಲ್ಮಾನರು ಮುಂದುವರಿದು ಬಂದಾಗ ಆನೇಗೊಂದಿಯ ಸಂಸ್ಥಾನದ ಕಡೆ ಸ್ತ್ರೀಯರ ಶೋಚನೀಯಾವಸ್ಥೆಯು ಎಲ್ಲರಿಗಿಂತಲೂ ಹೆಚ್ಚಿನದಾಗಿತ್ತು. ಆದ್ದರಿಂದ ಹೊನ್ನಮ್ಮನು ತನ್ನ ಗಂಡನಿಗೆ ತಮ್ಮ ಕುಲದ ಮೂಲಪುರುಷರ ನೆನಪುಗೊಟ್ಟಳು. ಈ ಸಮಯ ದಲ್ಲಿ ಭೀಮಾರ್ಜುನರೇ ಸಾಕ್ಷಾತ್ತಾಗಿ ಬಂದು ತಮ್ಮ ಪೌರುಷ ವನ್ನು ಬುಕ್ಕನ ಹೃದಯದೊಳಕ್ಕೆ ಧಾರೆಯಾಗಿ ಎರೆಯದಿದ್ದರೂ ಕೀರ್ತಿಶರೀರಿಗಳಾಗಿರುವ ಅವರ ಹೆಸರೇ ಬುಕ್ಕನಿಗೆ ಬೇಕಾದಷ್ಟು ಉತ್ತೇಜನಕಾರಿಯಾಯಿತು. ಆಗ ಬುಕ್ಕನು ಸ್ವದೇಶರಕ್ಷಣೆಯ ದೀಕ್ಷೆಯನ್ನು ತೊಟ್ಟು ಹೊರಬಿದ್ದು ಮಾಧವಾಚಾರ್ಯರೆಂಬ ಮಹ ನೀಯರ ಆಶ್ರಯವನ್ನು ಪಡೆದು ವಿಜಯನಗರವೆಂಬ ರಾಜ್ಯವನ್ನೆ ಸಂಸ್ಥಾಪನೆ ಮಾಡಿ ದೇಶಕ್ಕೆ ಒದಗಿದ್ದ ಉಪಹತಿಯನ್ನು ದೂರಗೊಳಿಸಿ ದನು. ಕುಲೋನ್ನತಿಯ ನೆನಪು ಇಷ್ಟು ಕೆಲಸವನ್ನು ಮಾಡಿತು. ಅಂಥ ಕುಲೋನ್ನತಿಯ ರಕ್ಷಣೆಯ ಅಗತ್ಯವನ್ನು ಹೆಚ್ಚಾಗಿ ಹೇಳ ಬೇಕಾದ್ದೇನಿದೆ?

ಶಿವಾಜಿಯಲ್ಲಿ ಕ್ಷತ್ರಿಯರಕ್ತದ ಬಿಸಿಯು ಮರಳಿ ಮರಳಿ ಎಷ್ಟೋ ವೇಳೆ ಕುದಿದು ತನ್ನ ಆವಿಯ ಬಿಸಿಯಿಂದಲೇ ಮುಸಲ್ಮಾನರ ದರ್ಪವನ್ನೆಲ್ಲ ಹೀರಿದ ಉದಾಹರಣೆಗಳಿವೆ. ಶಿವಾಜಿಯ ತಾಯಿಯು ಯಾವಾಗಲೂ ಗೋಪೂಜೆಯನ್ನೊಂದು ವ್ರತವಾಗಿ ಮಾಡುತ್ತಲಿದ್ದದರಿಂದಲೂ ಕ್ಷತ್ರಿಯರು ಗೋಬ್ರಾಹ್ಮಣರಕ್ಷಕರೆಂದು ಶಿವಾಜಿಯ ಬಲವಾದ ತಿಳಿವಳಿಕೆಯಿದ್ದದರಿಂದಲೂ ಗೋಹತ್ಯವನ್ನು ಮಾಡುವ ಜನರು ವ್ಯವಹಾರದಲ್ಲಿ ಎಷ್ಟೇ ಉಚ್ಚಪದವಿಯಲ್ಲಿದ್ದರೂ ಅವರಿಗೆ ವಂದಿಸುವದಿಲ್ಲವೆಂದು ಶಿವಾಜಿಯ ಹಟ. ಇಷ್ಟೇ ಅಲ್ಲ. ಗೋಹತ್ಯವನ್ನು ಮಾಡುವವರ ದೇಶವು ವೈದಿಕಕರ್ಮಗಳಿಗೆ ಪ್ರಶಸ್ತವಲ್ಲವಾದ್ದರಿಂದ ಬಿಜಾಪುರದಲ್ಲಿ ಮದುವೆಯನ್ನು ಮಾಡಿಕೊಳ್ಳುವದಿಲ್ಲವೆಂದು ಶಿವಾಜಿಯು ಪುಣೆಯಲ್ಲಿ ಆ ಕರ್ಮವನ್ನು ನೆರವೇರಿಸಿಕೊಂಡನು. ಶಿವಾಜಿಯ ತಂದೆಯು ಬಿಜಾಪುರದ ಸುಲ್ತಾನರಲ್ಲಿ ಅಧಿಕಾರಿಯಾಗಿದ್ದರೂ ಶಿವಾಜಿಯ ಲಕ್ಷ್ಯವು ತನ್ನ ವಂಶದ ಮೂಲ ಪುರುಷರ ಯೋಗ್ಯತೆಯ ಹೆಚ್ಚುಗಾರಿಕೆ ಯಾವದೆಂಬದರ ಕಡೆಗೆ ಹರಿದಿತ್ತು. ಆದ್ದರಿಂದ ಅವನು ತಂದೆಯ ಆಚರಣೆಯನ್ನು ಮುಖ್ಯವಾಗಿ ಎಣಿಸಲಿಲ್ಲ. ಈ ಅಭಿಪ್ರಾಯವು ಔರಂಗಜೇಬನನ್ನು ಕುರಿತು ಹೇಳಿದ ಅವನ ಈ ಕೆಳಗಿನ ಮಾತಿನಿಂದ ಸ್ಪಷ್ಟವಾಗುತ್ತದೆ.

> "ರಾಯತನದಲಿ ಬೆರೆತು, ರಾಜ್ಯ ।
> ಶ್ರೀಯ ನೆರೆ ಹೋಗಾಡಿ ಪರರಿಗೆ, ।
> ಜೀಯ ಬೆಸಸುವದೆಂದು ಜೀವಿಸುವವರು ನಾವಲ್ಲ ॥"
>
> —ಮಹಾಭಾರತ

ಇದರಿಂದಲೇ ತನ್ನ ತಂದೆಯು ಮುಸಲ್ಮಾನರ ಅಡಿಯಾಳಾಗಿರುವದು ಶಿವಾಜಿಯ ಮನಸ್ಸಿಗೆ ಬರುತ್ತಿರಲಿಲ್ಲವೆಂದು ಹೊಸದಾಗಿ ಹೇಳಬೇಕಾದ್ದೇ ಇಲ್ಲ. ಈ ರೀತಿಯಲ್ಲಿ ಅವನಿಗೆ ತನ್ನ ಕುಲದ ಮೂಲ ಪುರುಷರ ಮೇಲಿನ ಅಭಿಮಾನವು ಒಳ್ಳೆ ಚೆನ್ನಾಗಿ ಉಕ್ಕೇರುತ್ತಿತ್ತು.

ಮನುಷ್ಯನಲ್ಲಿ ಮನುಷ್ಯತ್ವದ ತಿರುಳು ಸ್ವಲ್ಪವಾದರೂ ಇದ್ದರೆ, ತನ್ನ ಧಮನಿಯಲ್ಲಿ ಪೂರ್ವಿಕರ ರಕ್ತದ ಕಾವು ಅಷ್ಟಿಷ್ಟಾದರೂ

ಉಳಿದುಕೊಂಡಿದ್ದರೆ ಆ ಮನುಷ್ಯನು ತನ್ನ ಕುಲೋನ್ನತಿಯನ್ನು
ಎಷ್ಟೇ ಕಳೆದುಕೊಂಡಿದ್ದರೂ ಅದರ ಮೇಲಿನ ಅಭಿಮಾನವು ಯಾವಾ
ಗಲಾದರೂ ತೋರಿಕೊಳ್ಳದೆ ಹೋಗುವದಿಲ್ಲ. ದೆಹಲಿಯ ಪೃಥ್ವೀ
ರಾಜನು ತನ್ನ ರಾಜಪುತ್ರಕುಲದ ಹೊಗರನ್ನು ಕಳೆದುಕೊಂಡು
ಅಕಬರಚಕ್ರವರ್ತಿಯ ಛತ್ರಚ್ಛಾಯೆಯಲ್ಲಿ ತನ್ನ ಅಂತಸ್ತಾಪನನ್ನು
ಹೋಗಲಾಡಿಸಿಕೊಳ್ಳುತ್ತಿದ್ದನು. ಇದೇ ಸಮಯದಲ್ಲಿಯೇ ಪ್ರತಾ
ಪಸಿಂಹನೆಂಬ ರಾಜಪುತ್ರನು ತನ್ನ ಕುಲೋನ್ನತಿಯ ಆವೇಶವನ್ನು
ತಂದುಕೊಂಡು ಅಕಬರನ ಉಪಟಳಕ್ಕೆ ಉಪ್ಪುಹಾಕದೆ ತನ್ನ ಹೆಸ
ರನ್ನು ಅನ್ವರ್ಥವಾಗಿ ಮಾಡಿಕೊಂಡು ಮೆರೆಯುತ್ತಿದ್ದನು. ಆದರೆ
ಆಗ ರಾಜಪುತ್ರರ ಕ್ಷಾತ್ರತೇಜಸ್ಸಿನ ಮೇಲೆಲ್ಲ ಮಂಕುದೇವತೆಯು
ಕಾಲುಚಾಚಿಕೊಂಡ ಕಾಲವಾಗಿತ್ತು. ಅಕಬರನ ರಾಜನೀತಿಕುಶ
ಲತೆಯಿಂದ ಮುಸಲ್ಮಾನರ ಸುದೈವವು ಎಲ್ಲೆಲ್ಲಿಯೂ ಅಟ್ಟಹಾಸ
ವನ್ನು ಪಡೆಯುತ್ತಿದ್ದ ಸಡಗರದಲ್ಲಿ ಪ್ರತಾಪನು ತನ್ನ ಬಿಂಕವನ್ನು
ಕಾದುಕೊಳ್ಳುವದು ಬಹುಕಠಿನವಾಗಿತ್ತು. ಒಂದು ಬಿಕ್ಕಟ್ಟಿನ
ಪ್ರಸಂಗದಲ್ಲಿ ಅವನು ಅಕಬರನಿಗೆ ಶರಣುಹೋಗಬೇಕೆಂದು ಮನಸ್ಸು
ಮಾಡಿ ಒಂದು ಪತ್ರವನ್ನು ಬರೆದನು. ಆ ಪತ್ರದ ಅಭಿಪ್ರಾಯವು
ಪೃಥ್ವೀರಾಜನಿಗೆ ತಿಳಿಯಿತು. ಪೃಥ್ವೀರಾಜನು ಮೊದಲೇ ಬಲೆಗೆ
ಬಿದ್ದವನಾಗಿದ್ದನು. ಈಗ ಪ್ರತಾಪನೂ ಬಂದು ಅಲ್ಲಿಗೆ ಸೇರುವದು
ಪೃಥ್ವೀರಾಜನಿಗೆ ಉತ್ತೇಜಕವೇ ಆಗಿತ್ತು. ಆದರೂ ಹಾಗಾಗು
ವದು ಅವನ ಮನಸ್ಸಿಗೆ ಒಗ್ಗಲಿಲ್ಲ. ತಾನು ತನ್ನ ಕುಲದ ಪವಿತ್ರತೆಗೆ
ಕಲಂಕವನ್ನುಂಟುಮಾಡಿದೆನೆಂದು ಅವನ ಮನಸ್ಸಿನಲ್ಲಿ ಕೊರೆಯು
ತ್ತಲೇ ಇತ್ತು. ಕೆಲವು ಪ್ರಾಪಂಚಿಕಭೋಗಗಳಿಗಾಗಿ **ತುಪ್ಪದಾ
ಸೆಗೆ ಎಂಜಲು ತಿಂದಂತೆ** ಅವನು ಮನೋದೌರ್ಬಲ್ಯದಿಂದ ಅಕಬರನ
ಮುಂದೆ **‘ಭಿಕ್ಷಾಂ ದೇಹಿ’** ಎಂದಿದ್ದನೇ ಹೊರತು ಅವನು ಮನಃ
ಪೂರ್ವಕವಾಗಿ ಮುಸಲ್ಮಾನನಾಗಿರಲಿಲ್ಲ. ಒಬ್ಬ ಪುಣ್ಯಪುರುಷ
ನಾದರೂ ತನ್ನ ಕುಲದ ಶುದ್ಧತೆಯ ವೇಗವನ್ನು ರಕ್ಷಣೆ ಮಾಡಿ
ಕೊಂಡಿರಲೆಂದು ಅವನಿಗೆ ಆಸೆ ಇತ್ತು. ಆದ್ದರಿಂದ ಅವನು ಪ್ರತಾ

ಪನ ಬೆನ್ನುತಟ್ಟಿ ಪ್ರಾಣಕ್ಕಿಂತಲೂ ಹೆಚ್ಚಾಗಿ ಕುಲೋನ್ನತಿಯನ್ನು ನೀನಾದರೂ ರಕ್ಷಿಸೆಂದು ತಾನೊಂದು ಪತ್ರವನ್ನು ಬರೆದನು. ಸ್ವಭಾವವಾಗಿಯೇ ಕುಲೀನನಾದ ಪ್ರತಾಪನಿಗೆ ಇಂಥ ಉತ್ತೇಜಕಪತ್ರವು ದೊರೆತ ಮೇಲೆ ಹೇಳುವದೇನು? ಅವನು ತನ್ನ ಕುಲೋನ್ನತಿಯ ರಕ್ಷಣೆಗಾಗಿಯೇ ತನ್ನ ದೇಹವನ್ನೆಲ್ಲ ತೇದು ಅದೇ ಹಂಬಲಿಕೆಯಲ್ಲಿಯೇ ಪ್ರಾಣವನ್ನು ಬಿಟ್ಟನು.

ಕುಲೋನ್ನತಿಯ ರಕ್ಷಣೆಗಾಗಿ ಹೆಣಗಿದ ಶ್ಲಾಘನೆಯ ವಿಷಯಕ್ಕೆ ಪ್ರತಾಪನನ್ನು ಬಿಟ್ಟರೆ ಇನ್ನೊಂದು ಬೆಟ್ಟು ಮಡಿಸುವದಕ್ಕೆ ಇನ್ನೊಬ್ಬನಿಲ್ಲ. ತನ್ನ ಮತ್ತು ತನ್ನ ಹೆಂಡಿರುಮಕ್ಕಳ ಹೊಟ್ಟೆಯನ್ನು ಹೊರೆಯುವದೆಂಬುದೊಂದು ಪ್ರತಾಪನಿಗೆ ವಿಷಯವೇ ಆಗಿರಲಿಲ್ಲ. ಅವನ ಜೀವಮಾನದಲ್ಲಿ ಅವನು ಪಟ್ಟಕಷ್ಟವೆಲ್ಲ ತನ್ನ ರಾಜಪುತ್ರತ್ವವನ್ನು ರಕ್ಷಣೆಮಾಡಿಕೊಳ್ಳುವದಕ್ಕಾಗಿ ಇತ್ತು. ಈ ಕೆಲಸಕ್ಕಾಗಿ ಜಗತ್ತಿನಲ್ಲಿ ಅವನಷ್ಟು ಶ್ರಮೆಯನ್ನು ಸಹಿಸಿದವರು ಯಾರೂ ಇಲ್ಲ. ರಾಜ್ಯವನ್ನು ಕಳೆದುಕೊಂಡು ಅಜ್ಞಾತನಾಗಿ ಹೆಂಡಿರುಮಕ್ಕಳೊಡನೆ ಕಗ್ಗಾಡಿನಲ್ಲಿ ಕಾಲವನ್ನು ಕಳೆಯುತ್ತ ಹತ್ತುದಿಕ್ಕುಗಳಿಂದಲೂ ತನ್ನನ್ನು ಬೇಟೆಯಾಡುವದಕ್ಕೆ ಸರ್ವಸನ್ನಾಹದಿಂದ ಬರುತ್ತಿದ್ದ ಮುಸಲ್ಮಾನರ ಬಲವನ್ನು ತನ್ನ ತೋಳಬಲದಿಂದ ಹಿನ್ನಟ್ಟಿಸುತ್ತ ಅನ್ನನೀರಿಲ್ಲದೆ ಅಲೆದಾಡುತ್ತಿದ್ದ ಅವನ ಸ್ಥಿತಿಯು ಎಂಥ ಕಲ್ಲೆದೆಯನ್ನಾದರೂ ಕರಗಿಸುವ ಹಾಗಿದೆ. ಒಂದು ದಿನ ಅವನು ಹಸಿವೆಯಿಂದ ಅಳುತ್ತಿದ್ದ ತನ್ನ ಮಗುವಿಗಾಗಿ ಬಹು ಕಷ್ಟದಿಂದ ಸಂಪಾದಿಸಿ ತಂದಿದ್ದ ಹಿಟ್ಟಿನಿಂದ ರೊಟ್ಟಿಯನ್ನು ಮಾಡಿಟ್ಟಿದ್ದಾಗ ಕಾಡುಬೆಕ್ಕು ಬಂದು ಅದನ್ನು ಹಾರಿಸಿಕೊಂಡು ಹೋದಾಗ ಆ ಮಗುವಿನ ದೀನ ದೃಷ್ಟಿಯನ್ನು ನೋಡಿ ಅವನ ಎದೆಯು ಕರಗಿ ನೀರಾಗಿ ಹೋಯಿತು. ಆಗಲೆ ಅವನು ತನ್ನ ಸೊಕ್ಕನ್ನು ಬಿಟ್ಟು ಅಕಬರನ ಅಭಯಹಸ್ತದ ಕಡೆಗೆ ಕಣ್ಣುಹಾಕಿದ್ದದ್ದು. ಇರಲಿ.

ಪ್ರತಾಪನು ಒಂದು ರಾಜಧಾನಿಯಲ್ಲಿದ್ದಾಗ ಆಮಾರ್ಗವಾಗಿ ಬಂದ ಅಕಬರನ ದಂಡಿನಲ್ಲಿದ್ದ ಮಾನಸಿಂಹನೆಂಬುವನು ಪ್ರತಾಪನ

ಮನೆಗೆ ಬಂದನು. ಮಾನಸಿಂಹನೂ ಶುದ್ಧರಾಜಪುತ್ರನೆ. ಆದರೆ ಅದು ಒರೀ ಇಟ್ಟ ಹೆಸರು. ಎಂದರೆ ಅಂಕಿತನಾಮ. ಪ್ರತಾಪಸಿಂಹನೆಂಬುದೂ ಅವನಿಗೆ ಇಟ್ಟ ಹೆಸರಾದರೂ ಅವನು ಅದನ್ನು ತನ್ನ ಯೋಗ್ಯತೆಯಿಂದ ಅನ್ವರ್ಥವಾಗಿ ಮಾಡಿಕೊಂಡಿದ್ದನು. ಮಾನಸಿಂಹನು ತನಗೆ ಇಟ್ಟ ಹೆಸರನ್ನು ತನ್ನ ಕುಲೋನ್ನತಿಯ ರಕ್ಷಣೆಯಿಂದ ಅನ್ವರ್ಥವಾಗಿ ಮಾನವನ್ನು ಸಿಂಹದಂತೆ ಮಾಡಿಕೊಳ್ಳದಿದ್ದದ್ದಿಷ್ಟೇ ಅಲ್ಲ; ಅಕಬರನ ಪಾದಾಭರಣವಾಗಿ ಮುಸಲ್ಮಾನರ ಮನೆಯ ಬಾಗಿಲ ಗ್ರಾಮಸಿಂಹನಾಗಿ ತನ್ನ ಹೆಸರನ್ನು ಅಪಾರ್ಥಕ್ಕೀಡುಮಾಡಿಕೊಂಡಿದ್ದನು. ಪ್ರತಾಪನಿಗೂ ಮಾನಸಿಂಹನಿಗೂ ಇದೇ ಭೇದ. ಆದರೂ ಮನೆಗೆ ಬಂದ ಅತಿಥಿಯನ್ನು ಪ್ರತಾಪನು ಯಥಾಯೋಗ್ಯವಾಗಿ ಆದರಿಸಿದನು. ಆದರೆ ಊಟಕ್ಕೆ ಮಾತ್ರ ಅವನ ಪಙ್ತಿಗೆ ಬರಲಿಲ್ಲ. ಕಾರಣವನ್ನು ಕೇಳಿದ್ದಕ್ಕೆ ಕುಲಧರ್ಮವನ್ನು ಉಲ್ಲಂಘನೆ ಮಾಡಿದವನೊಡನೆ ಸರಿಜೋಡಿಯಾಗಿ ಕುಳಿತುಕೊಳ್ಳುವದು ಕುಲದ ಪವಿತ್ರತೆಗೊಂದು ಕಲಂಕವೆಂದು ಉತ್ತರವು ಬಂತು. ಹೀಗೆ ಸ್ವಜಾತಿಯವನನ್ನಾದರೂ ಅವನಲ್ಲಿ ಜಾತಿವಾತ್ಸಲ್ಯವಿಲ್ಲದ ಕಾರಣದಿಂದ ತನ್ನ ಧಾರ್ಮಿಕಕಲ್ಪನಾಯುಕ್ತವಾದ ಭೋಜನಾದಿ ವ್ಯವಹಾರಕ್ಕೆ ಅವನನ್ನು ಸೇರಿಸದಿರುವಷ್ಟು ಪ್ರತಾಪನಲ್ಲಿ ಕುಲೋನ್ನತಿಯ ರಕ್ಷಣೆಯ ಜಾಗರೂಕತೆಯು ತಲೆ ಎತ್ತಿಕೊಂಡಿತ್ತು. ಕುಲೋನ್ನತಿಯ ರಕ್ಷಣೆಯು ಬಿಸಿಲು ಬಂದ ಕಡೆಗೆ ಕೊಡೇ ಹಿಡಿಯುವಂತೆ ಸಮಯ ಬಂದ ಹಾಗೆ ನಡೆಯತಕ್ಕದ್ದಲ್ಲ. ಅದನ್ನೊಂದು ವ್ರತವಾಗಿ ಆಚರಿಸತಕ್ಕದ್ದು. ಇದರ ಉದ್ಯಾಪನೆಯನ್ನು ಪ್ರತಾಪನು ಮಾತ್ರ ಬಹು ಚೆನ್ನಾಗಿ ನೆರವೇರಿಸಿರುವನು.

ಮಾನಸಿಂಹನಲ್ಲಿಯಾದರೂ ಕುಲೋನ್ನತಿಯ ಕಲ್ಪನೆಯು ಎಷ್ಟೇ ಮಾಸಿದ್ದರೂ ಅದರ ಹೊಳಪು ಪ್ರಸಂಗ ಬಂದಾಗ ಝುಗಝುಗಾಯಮಾನವಾಗಿ ಹೊಳೆಯದೆ ಹೋಗುತ್ತಿರಲಿಲ್ಲ. ಅವನು ತನ್ನ ಅರಸುತನವನ್ನು ಬಿಟ್ಟು ಮುಸಲ್ಮಾನರ ಆಳುತನವನ್ನು ಕೈಗೊಂಡಿದ್ದರೂ ಅವನು ಅಕಬರನ ಮೈದುನನಾದ್ದರಿಂದ ಏನು ಮಾಡಿದರೂ ನಡೆ

ಯುತ್ತಿತ್ತಾದರೂ ದಂಡೆತ್ತಿ ಹೊರಟಾಗ ತನ್ನ ಕುಲಸ್ಥರನ್ನು ಕಂಡೊಡನೆ ಅವನ ಮನಸ್ಸು ಮಾರ್ದವವನ್ನು ಪಡೆಯುತ್ತಿತ್ತು. ತಾನು ಹೊಸಮತವನ್ನು ಅಂಗೀಕರಿಸಿದ್ದರೂ ಅದು ಕೇವಲ ಲೌಕಿಕವೈಭವದ ದುರಾಶೆಯಿಂದ ಕೈಕೊಂಡದ್ದಾಗಿತ್ತೆ ಹೊರತು ಅಂತಃಕರಣದಲ್ಲಿ ರಾಜಪುತ್ರತ್ವವು ಸಂಪೂರ್ಣವಾಗಿ ಇಂಗಿ ಹೋಗಿರಲಿಲ್ಲ. ಯುದ್ಧದಲ್ಲಿ ಯುದ್ಧಧರ್ಮವನ್ನನುಸರಿಸಿ ಶತ್ರುಗಳೊಡನೆ ಸಮಯ ಬಂದಂತೆ ಎಷ್ಟೇ ಹೋರಾಡಿದರೂ ತನ್ನ ಜಾತಿಯ ಜನರ ಊರು ಕೇರಿಗಳನ್ನು ಸೂರೆಮಾಡುವದಕ್ಕೆ ಅವನೆಂದೂ ಮನಸ್ಸುಮಾಡಿದವನಲ್ಲ. ಕುಲಾಭಿಮಾನವೆಂಬುದು ಮಾತೃಪ್ರೇಮದಂತೆ ದೇವರು ಮನುಷ್ಯನಿಗೆ ದಯಮಾಡಿ ಕೊಟ್ಟಿರುವ ಒಂದು ವರ. ವಿವೇಕಿಗಳು ಯಾರೂ ಇದನ್ನು ವ್ಯರ್ಥಮಾಡಿಕೊಳ್ಳಬಾರದು.

ನಮ್ಮ ದೇಶದಲ್ಲಿ ಎಷ್ಟೋ ಜನ ಸ್ತ್ರೀಯರು ಕೂಡ ಕುಲೋನ್ನತಿಯ ರಕ್ಷಣೆಗಾಗಿ ಪುರುಷಸಿಂಹರಾದ ಉದಾಹರಣೆಗಳುಂಟು. ಅಹಲ್ಯಾಬಾಯಿಯು ಆಳುತ್ತಿದ್ದಾಗ ಪುಣೆಯಿಂದ ರಘುನಾಥರಾಯನೆಂಬುವನು ದಂಡೆತ್ತಿ ಬಂದನು. ಅಹಲ್ಯಾಬಾಯಿಯು ಸ್ತ್ರೀಸ್ವಭಾವವಾದ ಕೋಮಲಹೃದಯದವಳಾದ್ದರಿಂದ ಅತ್ಯಂತ ಶಾಂತತಾಪ್ರಿಯಳಾಗಿದ್ದಳು. ಆಕೆಯ ಕೈಕೆಳಗೂ ಸೇನೆಯೂ ಸೇನಾಪತಿಗಳೂ ಇದ್ದರೂ ಪ್ರಬಲರಾದ ಪುಣೆಯವರ ಮುಂದೆ ಆಕೆಯ ಬೆಳಕು ಬೀಳುವಹಾಗಿರಲಿಲ್ಲ. ಈ ಗುಟ್ಟನ್ನರಿತೇ ಬುದ್ಧಿವಂತನಾದ ಆ ಬ್ರಾಹ್ಮಣನು ಆಕೆಯ ಮೇಲೆ ತನ್ನ ದಂಡನ್ನು ತಂದನು. ಅಹಲ್ಯಾಬಾಯಿಯು ಸ್ತ್ರೀಯಾಗಿದ್ದದ್ದು ನಿಜ. ಆದರೆ ರಘುನಾಥರಾಯನ ಕಲ್ಪನೆಯಲ್ಲಿದ್ದಂಥ ಹೆಣ್ಣಲ್ಲ. ಇದು ಅವನಿಗೆ ಆಮೇಲೆ ತಿಳಿದಾಗ ಅವನು **'ವಿಪ್ರಾಃ ಪಶ್ಚಿಮಬುದ್ಧಯಃ'** ಎಂದರೆ ಬ್ರಾಹ್ಮಣರು ಕೆಟ್ಟಮೇಲೆ ಬುದ್ಧಿಕಲಿಯುವವರೆಂಬ ಗಾದೆಯನ್ನು ನೆನೆಸಿಕೊಂಡನು. ರಘುನಾಥರಾಯನು ಬಂದ ಸುದ್ದಿಯನ್ನು ಕೇಳುತ್ತಲೇ ಅಹಲ್ಯಾಬಾಯಿಯು ಸೇನಾಪತಿಗಳನ್ನೆಲ್ಲ ಹುರಿದುಂಬಿಸಿ ತಾನೇ ಕಾಶಿಯನ್ನು ಬಿಗಿದು ಕಟ್ಟಿಕೊಂಡು ಮಹಿಷಾಸುರಮರ್ದಿನಿಯನ್ನು ಹೃದಯ

ದಲ್ಲಿ ಆವಾಹನೆಮಾಡಿಕೊಂಡು ಖಡ್ಗಧಾರಿಣಿಯಾಗಿ ಮುಂದಾಳಾದಳು. ಆಕೆಯು ಧೈರ್ಯದಿಂದ ಮುಂದುವರಿದು ಬಂದ ಭರವನ್ನು ನೋಡಿಯೇ ಜನ್ಮದಿಂದಲೂ ಬ್ರಾಹ್ಮಣನಾದ ರಘುನಾಥರಾಯನ ಎದೆಯು ಬಡಿದುಕೊಳ್ಳುವದಕ್ಕಾರಂಭವಾಯಿತು. ಕೊನೆಗೆ ಅವನು ಆಕೆಯೊಡನೆ ಸಂಧಿಯನ್ನು ಮಾಡಿಕೊಂಡು ಮುಖದ ಮೇಲೆ ಮುಸಕು ಹಾಕಿಕೊಂಡು ಊರಿಗೆ ಹಿಂದಿರುಗಬೇಕಾಯಿತು. ಅಹಲ್ಯಾಬಾಯಿಯು ಆಗ ತನ್ನ ಕುಲೋನ್ನತಿಯನ್ನು ನೆನಪಿಗೆ ತಂದುಕೊಳ್ಳದೆ ಹೋಗಿದ್ದರೆ ಆಕೆಯ ರಾಜ್ಯವು ಆಗಲೇ ನಾಮಾವಶೇಷವಾಗಿ ಹೋಗುತ್ತಿತ್ತು.

ನಿಜವಾಗಿ ಕೈಕೈಕೂಡಿದ್ದರೆ ಅಹಲ್ಯಾಬಾಯಿಯ ಗತಿ ಏನಾಗುತ್ತಿತ್ತೊ ಎಂದು ಕೆಲವರು ಗಲ್ಲವಿಲಾಸೆಯ ಗಂಡಸರು ಯೋಚಿಸಬಹುದು. ನಮ್ಮ ದೇಶದಲ್ಲಿ ಶಕ್ತಿಯೆಂಬುವದು ಸ್ತ್ರೀರೂಪವಾಗಿರುವದೆಂಬದನ್ನು ಅವರು ಮನಸ್ಸಿಗೆ ತಂದುಕೊಳ್ಳಬೇಕು. ನಮ್ಮಲ್ಲಿ ಸ್ತ್ರೀಯರು ಸಾಮಾನ್ಯವಾಗಿ ಆಕಳುಗಳಂತೆ ಸಾಧುವಾಗಿರುವರು. ಆದರೆ ಅವರನ್ನು ಕೆಣಕಿದರೆ ಅವರು ಒಡನೆ ಹೆಣ್ಣುಹುಲಿಯಾಗುವರು. ಝಾನ್ಸಿ ಸಂಸ್ಥಾನದ ಆಳಿಕೆಯು ಒಮ್ಮೆ ಲಕ್ಷ್ಮೀಬಾಯಿಯ ಹಸ್ತಲೇಖೆಯಲ್ಲಿಡಗಿತ್ತು. ತನ್ನ ಗಂಡನು ಅಕಾಲಮೃತ್ಯುವಿಗೆ ತುತ್ತಾದಾಗ ಆಕೆಯು ತನ್ನ ಕುಲೋನ್ನತಿಯ ಮೇಲೆ ದೃಷ್ಟಿಯಿಟ್ಟು ಆ ಸಂಸ್ಥಾನವನ್ನು ಊರ್ಜಿತಗೊಳಿಸುವದಕ್ಕಾಗಿ ರಾಜ್ಯಸೂತ್ರವನ್ನು ಕೈಗೆ ತೆಗೆದುಕೊಂಡಳು. ಕಾಲಚಕ್ರದ ವೈಷಮ್ಯದಿಂದ ಇಂಗ್ಲೀಷರು ಆಕೆಯನ್ನು ಮೂಲೆಗೆ ಕೂಡಿಸಿ ತಾವು ಸೂತ್ರಧಾರಕರಾದರು. ಲಕ್ಷ್ಮೀಬಾಯಿಯ ಈ ನಿರ್ಮಾಲ್ಯಸ್ಥಿತಿಗೂ ಶನಿಯ ವಕ್ರದೃಷ್ಟಿತಾಕಿತು. ಲಕ್ಷ್ಮೀಬಾಯಿಯು ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕಾದರೆ ಇಂಗ್ಲೀಷರ ಮೇಲೆ ಕೈಮಾಡಲೇಬೇಕಾದ ಪ್ರಸಂಗವು ಒದಗಿತು. ಈ ಸಮಯದಲ್ಲಿ ತಾನು ಜೀವಗಳ್ಳಳಾದರೆ ತನ್ನ ಕುಲಕ್ಕೆ ಅಪಕೀರ್ತಿಯುಂಟಾಗುವದೆಂದು ಆಕೆಯು ತಾನೇ ಯೋಧಾಗ್ರೇಸರಳಾಗಿ ಎಷ್ಟೋವೇಳೆ ಪೆಟ್ಟುತಿಂದು ಹಿಮ್ಮೆಟ್ಟಿ ಮತ್ತೆಯೂ ಗರಿಗಟ್ಟಿಕೊಂಡು

ಬಂದು ಕಾಣಿಸಿಕೊಂಡು ತನ್ನ ಪ್ರಬಲವಾದ ಪರಾಕ್ರಮದಿಂದ ಮಹಾಚತುರರಾದ ಇಂಗ್ಲೀಷರಿಗೆ ಕೂಡ ಮೂಗಿನ ಮೇಲೆ ಬೆರಳಿಡಿಸಿರುವಳು. ಕೊನೆಗೂ ಲಕ್ಷ್ಮೀಬಾಯಿಯು ತನ್ನ ಜೀವವನ್ನು ರಕ್ಷಣೆ ಮಾಡಿಕೊಳ್ಳುವದಾಗಲಿಲ್ಲ. ಆದರೆ ಇದೊಂದು ದೊಡ್ಡ ನ್ಯೂನತೆಯಲ್ಲ. ಹೋದ ಜೀವವು ಮತ್ತೆ ಹುಟ್ಟುವದು; ಹೋದ ಮಾನವು ಮತ್ತೆ ಹುಟ್ಟುವದೇ? ಸರ್ವವಿಧದಿಂದಲೂ ತನ್ನ ಕುಲದ ಮಾನವನ್ನು ರಕ್ಷಿಸುವದೇ ಪರಮಧರ್ಮವು. ಅದರ ಸೋಲು ಗೆಲುವುಗಳು ಮುಖ್ಯವಲ್ಲ; ಪ್ರಾಣವು ಹೋಗುವವರೆಗೂ ಅದಕ್ಕಾಗಿ ಹೆಣಗುವದೇ ಮುಖ್ಯ.

ಸ್ತ್ರೀಯರು ಈ ರೀತಿಯಲ್ಲಿ ಗಂಡುಬೀರಿಯರಾಗುವದು ನಮ್ಮ ದೇಶಕ್ಕೆ ಸಲ್ಲದೆಂದು ಯಾರಾದರೂ ಯೋಚಿಸಬಹುದು. ಸರ್ವಸಾಮಾನ್ಯವಾಗಿ ಅವರು ಹೊರಬೀಳುವದಿಲ್ಲವೇ ಹೊರತು ಸಮಯದಲ್ಲಿ ಅವರೆಂದಿಗೂ ಹೇಡಿಗಳಲ್ಲ. ರಾವಣನು ಕದ್ದೊಯ್ಯುವಾಗ ಸೀತೆಯು ಆಗಲೇ ತನ್ನ ಪ್ರಭಾವದಿಂದ ಅವನನ್ನು ಸುಟ್ಟು ಬೂದಿಯಾಗಿ ಮಾಡಿಬಿಡಬಹುದಾಗಿತ್ತಾದರೂ ಆಕೆ ಹಾಗೆ ಮಾಡದೆ ಇದ್ದದ್ದಕ್ಕೆ ಕಾರಣವಿದೆ. ಅದು ಆಕೆಯ ಬಾಯಿಯಿಂದಲೇ ಮಾರುತಿಯ ಮುಂದೆ ಹೊರಬಿದ್ದಿದೆ. ಮಾರುತಿಯು ಮೊದಲನೆಯ ಸಲ ಸೀತೆಯನ್ನು ಕಂಡು ಮಾತಾಡಿದ ಮೇಲೆ ಆಕೆಯ ದೀನದಶೆಯನ್ನೂ ಶ್ರೀರಾಮದರ್ಶನದ ಮೇಲೆ ಆಕೆಗಿರುವ ಉತ್ಸುಕತೆಯನ್ನೂ ನೋಡಿ ಆಕೆಯನ್ನು ಹೆಗಲ ಮೇಲೆ ಕೂಡಿಸಿಕೊಂಡು ಕರೆದುಕೊಂಡೇ ಹೋಗಿಬಿಡುವ ಯೋಚನೆಯನ್ನು ತಂದುಕೊಂಡನು. ಇದರಿಂದ ಅನಾಯಾಸವಾಗಿ ಬೇಗ ಶ್ರೀರಾಮದರ್ಶನವಾಗುತ್ತಿತ್ತಾದರೂ ಸೀತಾದೇವಿಯು ಇದಕ್ಕೊಪ್ಪಲಿಲ್ಲ. ವೀರಪುತ್ರಿಯೂ ವೀರಪತ್ನಿಯೂ ಆದ ತಾನು ಹೇಗೋ ನುಸುಳಿಕೊಂಡು ಪಾರಾಗುವದು ತನ್ನ ಕುಲೋನ್ನತಿಯ ಹೆಸರನ್ನು ಕೆಡಿಸುವದೆಂದೂ ದೇವತಾಸ್ತ್ರೀಯರನ್ನು ಕೂಡ ಕಾಮಾಂಧದೃಷ್ಟಿಯಿಂದ ನೋಡುತ್ತಿದ್ದ ರಾಕ್ಷಸರ ದುಷ್ಟಶಾಸನದಿಂದ ತಾನೊಬ್ಬಳೇ ಬಿಡುಗಡೆಯಾದವಳೆನಿಸದೆ ಸರ್ವರಿಗೂ ಸುಖವಾಗುವಂತೆ ರಾವ

ಣನ ವಧೆಗೆ ದಾರಿಯನ್ನು ಮಾಡಿಕೊಟ್ಟು ಶ್ರೀರಾಮನ ಯಶೋ ದುಂದುಭಿಯ ಧ್ವನಿಯನ್ನು ಹತ್ತುದಿಕ್ಕುಗಳಲ್ಲಿಯೂ ಘೋರ್ಗರೆಯಿಸಿ ತನ್ನ ಕುಲಪ್ರಭಾವದಿಂದ ಜಗತ್ತನ್ನೆಲ್ಲ ಬೆಳಗಿಬಿಡಬೇಕೆಂದೂ ಆಕೆಯು ತನ್ನ ಉದ್ದೇಶವನ್ನು ವ್ಯಕ್ತಮಾಡಿದಳು. ಸೀತೆಯು ದಶಕಂಠರಾವ ಣನ ವಿಷಯದಲ್ಲಿ ಈ ವಿಧವಾದ ರಾಜನೀತಿಯನ್ನು ತೋರಿಸಿದ್ದರೂ ಶತಕಂಠರಾವಣನ ಮೇಲೆ ತಾನೇ ಕೈಮಾಡಿ ದುಷ್ಟನಿಗ್ರಹವನ್ನು ಮಾಡಿಯೂ ಇರುವಳು.

ಇಷ್ಟೆಲ್ಲ ಅಭಿಪ್ರಾಯಗಳನ್ನೂ ಗರ್ಭೀಕರಿಸಿ ಸುಭಾಷಿತಕಾ ರರು ಕುಲೋನ್ನತಿಯ ರಕ್ಷಣೆಯ ವಿಷಯದಲ್ಲಿ ಹೇಳಿರುವದೇನೆಂದರೆ—

"ಪಳಿವಾವುದು ಕುಲಭಂಗಂ; |<br>
ತಿಳಿವಾವುದು ಸುಮತಿ; ಬಂಧವಾವುದು ಮೋಹಂ; ||<br>
ಕಳವಾವುದನ್ನೃತ; ವೆಡರಿಂ; |<br>
ಸುಳಿವಾವುದು ಧೃತಿ! ವಿವೇಕಚೂಡಾರತ್ನ ||"

ಆದ್ದರಿಂದ ಪ್ರತಿಯೊಬ್ಬನೂ ಕುಲೋನ್ನತಿಯನ್ನು ರಕ್ಷಣೆ ಮಾಡಿಕೊಂಡು ಕುಲದೀಪಕನಾಗುವದಕ್ಕೆ ತನ್ನ ಸರ್ವಪ್ರಯತ್ನ ವನ್ನೂ ಮಾಡಬೇಕು.



# ನೋಡಿದರೆ ಬಿಡದೆ ಇರುವ ಪುಸ್ತಕಗಳು

**ಲೇಖಕ:— ಹೊಸಕೆರೆ ಚಿದಂಬರಯ್ಯ**

---

**ಆರ್ಯಧರ್ಮಪ್ರದೀಪ:** — ಹುಡುಗರ ಮನಸ್ಸಿನಲ್ಲಿ ಕೂಡ ಬಿಂಬಿಸುವಂತೆ ಹಿಂದುಮತದ ಧರ್ಮಸೂಕ್ಷ್ಮಗಳನ್ನೆಲ್ಲ ಚೆನ್ನಾಗಿ ವಿವರಿಸಿ ಅವುಗಳಿಗೆ ಅನೇಕಶಾಸ್ತ್ರವಚನಗಳನ್ನೂ ಸಾಧುಸಂತರ ಉಕ್ತಿಗಳನ್ನೂ ಪ್ರಮಾಣವಾಗಿ ಕೊಟ್ಟು ಅವುಗಳ ಅರ್ಥವನ್ನು ಯುಕ್ತಿಯಿಂದಲೂ ಪರಿಪುಷ್ಟಿಗೊಳಿಸಿ ಪುರಾಣಪುರುಷರ ದೃಷ್ಟಾಂತಗಳನ್ನೂ ದುಂದುಮಾಡಿರುವ ಗ್ರಂಥ. ವಿದ್ಯಾವರ್ಧಕಸಂಘದಲ್ಲಿ ಬಹುಮಾನವನ್ನು ಪಡೆದದ್ದು. ರೂ. ೩

**ಅನುಭವಾಮೃತ:**— ಅನೇಕ ಪುರಾತನಗ್ರಂಥಗಳನ್ನು ಪರಿಶೋಧಿಸಿ ಬರೆದ ಶುದ್ಧಪ್ರತಿ. ಶ್ರುತಿಸ್ಮೃತಿವಾಕ್ಯಗಳ ಆಧಾರಗಳನ್ನು ಕೊಟ್ಟು ಗ್ರಂಥದ ಮರ್ಮಗಳನ್ನೆಲ್ಲ ಚೆನ್ನಾಗಿ ವಿವರಿಸುತ್ತ ಕಠಿನಶಬ್ದಗಳ ಅರ್ಥವನ್ನೂ ಗಹನವಾದ ಕಡೆಯ ತಾತ್ಪರ್ಯವನ್ನೂ ಹೇಳಿ ವಾಚಕರಜ್ಞಾನಪ್ರಾಪ್ತಿಗೆ ಬೇಕಾಗುವ ಸೌಕರ್ಯಗಳನ್ನೆಲ್ಲ ಸೂರೆಮಾಡಿ ಆದರ್ಶಪ್ರಾಯವಾಗಿ ಬರೆದಿರುವ "**ಸರ್ವಾರ್ಥಸಂದರ್ಶಿನಿ**" ಎಂಬ ಟೀಕೆಯೊಡನೆ ಒಳ್ಳೆಕಾಗದದ ಮೇಲೆ ಅಂದವಾದ ಮುದ್ರಣ. **ಮೈಸೂರು ಸರಕಾರದಿಂದ ದೇವರಾಜ ಬಹದ್ದೂರರವರ ಧರ್ಮನಿಧಿಯ ಬಹುಮಾನವನ್ನು ಪಡೆದಿರುವದು.** ಮತ್ತು ಮೈಸೂರುಸರಕಾರದವರ ೧೬—೮—೨೬ರ ಡಿ. ಸಂ. ೩೫ರಲ್ಲಿ ಪುಸ್ತಕಭಂಡಾರಕ್ಕೆಂದು ಅಂಗೀಕೃತವಾಗಿರುವದು. ಸಾಧಾರಣಪ್ರತಿಗೆ ೧-೮-೦, ಪುಸ್ತಕಭಂಡಾರಕ್ಕಾಗಿ ಮುದ್ರಿಸಿರುವ ಉತ್ತಮಪ್ರತಿಗೆ ರೂ.೩

**ಶ್ರೀಶಂಕರಾಚಾರ್ಯರ ಆಖ್ಯಾನ:**— ಹರಿಕಥಾರೂಪವಾಗಿ ಪ್ರತಿಪಾದಿಸುವದಕ್ಕೆ ತಕ್ಕ ಹಾಗೆ ಪದಪದ್ಯಗಳನ್ನೆಲ್ಲ ಜೋಡಿಸಿ ಬೋಧಪ್ರದವಾಗಿಯೂ ಭಕ್ತಿವರ್ಧಕವಾಗಿಯೂ ಬರೆದಿರುವದು. ರೂ. ೦—೮—೦

ಇವುಗಳಲ್ಲದೆ ಈ ಗ್ರಂಥಕರ್ತರ ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ, ಕಲಿಸಂತರಣನಾಟಕ, ಭಕ್ತಿಗೀತಾವಳಿ, ಪರಮಾತ್ಮಸ್ತುತಿ, ರಾಮನಾಮದ ಮಹಿಮೆ, ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ, ರಾಸಕ್ರೀಡೆ, ಮನಸ್ಸಿಗುಪದೇಶ, ಝಾಂಸಿ ಲಕ್ಷ್ಮೀಬಾಯಿ— ಮೊದಲಾದವುಗಳೂ ದೊರೆಯುವವು.

---

ಮಂಚಲದೊರೆ ರಾಮರಾವ್,

**ಎಸ್. ಎಸ್. ಎನ್. ಬುಕ್‌ಡಿಪೋ, ಬಸವನಗುಡಿ, ಬೆಂಗಳೂರು ಸಿಟಿ**

# ನೋಡಿದರೆ ಬಿಡದೆ ಇರುವ ಪುಸ್ತಕಗಳು

**ಲೇಖಕ:— ಹೊಸಕೆರೆ ಚಿದಂಬರಯ್ಯ**

**ನೀತಿಗಳ ನೆಲಗಟ್ಟು:** — ಪುರಾಣೇತಿಹಾಸಗಳಲ್ಲಿರುವ ಒಂದೊಂದು ನೀತಿಯ ಅನೇಕ ಉದಾಹರಣೆಗಳನ್ನು ಒಂದೇ ಕಡೆಗೆ ತಂದು ಅವುಗಳನ್ನು ಬೇರೆ ಬೇರೆ ಮೆಟ್ಟಿಲುಗಳಾಗಿ ಮಾಡಿ ನೀತಿವಿಚಾರಕ್ಕೆ ಹೊಳಪು ಕೊಟ್ಟಿರುವದು. ೧ನೇ ಭಾಗ ೦–೧೨–೦, ೨ನೇ ಭಾಗ ೦–೧೨–೦, ಎರಡು ಭಾಗಗಳೂ ಕೂಡಿರುವದಕ್ಕೆ ರೂ. ೧–೮–೦

**ಆತ್ಮಶಕ್ತಿಯ ತೇಜಸ್ಸು:** — ಆತ್ಮಶಕ್ತಿಯ ವಿವಿಧವಿಚಾರವಿಶೇಷಗಳನ್ನು ಇತಿಹಾಸಪ್ರಸಿದ್ಧರಾದವರ ಉದಾಹರಣೆಯೊಡನೆ ವಿವರಿಸಿರುವದು. ಮದರಾಸಿನ ವಿದ್ವತ್ಪರೀಕ್ಷೆಗೆ ಅಂಗೀಕೃತವಾಗಿದೆ. ರೂ. ೧–೮–೦

**ಭರತಖಂಡದ ಜೀವಜ್ಯೋತಿಗಳು:**— ಐತಿಹಾಸಿಕಮಹನೀಯರನೇಕರ ಚರಿತ್ರೆಯನ್ನು ಸಚಿತ್ರವಾಗಿ ವಿವರಿಸಿರುವದು. ಮದರಾಸಿನ ಇಂಟರ ಮೀಡಿಯೇಟಿಗೆ ಅಂಗೀಕೃತವಾಗಿದೆ. ರೂ. ೧–೪–೦

**ಶ್ರೀವಿದ್ಯಾರಣ್ಯಕಾವ್ಯ:**– ದೇಶಾಭಿಮಾನವನ್ನೂ ಧರ್ಮಾಭಿಮಾನವನ್ನೂ ಹುರಿದುಂಬಿಸುವ ಚಂಪು. ಮದರಾಸಿನ ವಿದ್ವತ್ಪರೀಕ್ಷೆಗೆ ಅಂಗೀಕೃತವಾಗಿದೆ. ಮೈಸೂರು ಸರಕಾರದವರು ೫.೨-೩೩ರ ಡಿ. ನಂ. ೩೭ರಲ್ಲಿ ಪುಸ್ತಕಭಂಡಾರಕೆ ಅಂಗೀಕರಿಸಿದ್ದಾರೆ. ವಿದ್ಯಾವರ್ಧಕಸಂಘದವರು ಬಹುಮಾನಿಸಿದ್ದಾರೆ ರೂ. ೧–೦–೦

**ಭರತನ ಬಂಧುಪ್ರೇಮ:**– ಪ್ರಾಚೀನಸಂಪ್ರದಾಯಗಳನ್ನು ಆಧುನಿಕ ದೃಷ್ಟಿಯಿಂದ ಸಕಾರಣವಾಗಿ ವಿವೇಚಿಸುತ್ತ ಬರೆದಿರುವ ಭರತನ ಕಥೆ. ಮೈಸೂರುದೇಶದ IV ಫಾರಮಿಗೆ ಅಂಗೀಕೃತವಾದದ್ದು. ಮತ್ತು ವಿದ್ಯಾವರ್ಧಕಸಂಘದಿಂದ ಬಹುಮಾನವನ್ನು ಪಡೆದದ್ದು. ರೂ. ೦–೧೦–೦

**ಗುಣನಿರೂಪಣೆ**— ಇತಿಹಾಸದಿಂದ ಉದಾಹರಿಸಿ ಗುಣಗಳನ್ನೆಲ್ಲ ಪೀರ್ವಾಪರ್ಯವತ್ತರವಾಗಿ ಬಣ್ಣಿಸಿರುವದು. ಮೈಸೂರುದೇಶದ IV ಫಾರಮಿಗೆ ಅಂಗೀಕೃತವಾದದ್ದು. ರೂ. ೦–೮–೦

**ವಾಲ್ಮೀಕಿಯ ಜಯ:**-ಜ್ಞಾನಬಲಕ್ಕಿಂತಲೂ ಬಾಹುಬಲಕ್ಕಿಂತಲೂ ಪ್ರೇಮಬಲವೇ ಜಗತ್ತಿನ ಸಮೃದ್ಧಿಗೆ ಕಾರಣವೆಂದು ತೋರಿಸುವ ಬಂಗಾಲೀ ಕಾದಂಬರಿಯ ಅನುವಾದ. ಮೈಸೂರು ಸರಕಾರದವರು ೧೬-೮-೨೬ರ ಡಿ. ಸಂ. ೩೪೯ರಲ್ಲಿ ಪುಸ್ತಕಭಂಡಾರಕ್ಕೆ ಅಂಗೀಕರಿಸಿದ್ದಾರೆ. ರೂ. ೦–೮–೦

**ತಾರಾನಾಥತರ್ಕವಾಚಸ್ಪತಿ:**– ಅಪ್ರತಿಮಪಂಡಿತನಾಗಿ ಉದ್ಯೋಗಬಲದಿಂದ ತನ್ನ ಜೀವಿಕೆಯನ್ನು ಉನ್ನತಸ್ಥಿತಿಯಲ್ಲಿಟ್ಟುಕೊಂಡು ಧರ್ಮಾರ್ಥವಾಗಿ ವಿದ್ಯೆಯನ್ನು ಪ್ರಚಾರಮಾಡಿ ಪರೋಪಕಾರದಿಂದ ಸಮಸ್ತರಾಜರನ್ನೂ ಬೆರಗುಮಾಡಿರುವಂಥ ಚರಿತ್ರೆಯ ಮೇಲುಪಸ್ತಿ.

ಮಂಚಲದೊರೆ ರಾಮರಾವ್,

**ಎಸ್. ಎಸ್. ಎನ್. ಬುಕ್‌ಡಿಪೋ, ಬಸವನಗುಡಿ, ಬೆಂಗಳೂರು ಸಿಟಿ**